ಜೀವನ ಸಾಹಿತ್ಯ—೯

# ಚಂದ್ರಿಕೆ

ಶ್ರೀಮತಿ "ಗುಹಪ್ರಿಯೆ"
ಅನುವಾದಕರು ನವಗಿರಿನಂದ

ಜೀವನ ಕಾರ್ಯಾಲಯ
ಬಸವನಗುಡಿ
ಬೆಂಗಳೂರು

# ಪ್ರಕಾಶಕರ ಮಾತು

ಶ್ರೀಮತಿ "ಗುಹಪ್ರಿಯೆ" ಇವರ ತಮಿಳು ಕಾದಂಬರಿಯನ್ನು ಶ್ರೀ 'ನವಗಿರಿನಂದ'ರು ಅನುವಾದಿಸಿ ಕೊಟ್ಟಿದ್ದಾರೆ. ಜೀವನ ಪತ್ರಿಕೆಯಲ್ಲಿ ಭಾಗ ಭಾಗವಾಗಿ ಧಾರಾವಾಹಿಯಾಗಿ ಬರುತ್ತಿದ್ದ ಈ ಕಾದಂಬರಿ ಈಗ ಪುಸ್ತಕರೂಪದಲ್ಲಿ ಪ್ರಕಟವಾಗುತ್ತಿದೆ.

ಈ ಕಾದಂಬರಿಯನ್ನು ನಮ್ಮ ಸಾಹಿತ್ಯ ಮಾಲೆಯಲ್ಲಿ ಸೇರಿಸಲು ಅನುಮತಿಯನ್ನು ಕೊಟ್ಟ ಶ್ರೀಮತಿಯವರಿಗೂ, ಭಾಷಾಂತರಿಸಿ ಕೊಟ್ಟ ಶ್ರೀಯುತರಿಗೂ ನಾವು ಕೃತಜ್ಞರಾಗಿದ್ದೇವೆ.

ಜಯ ಸಂ॥ ಕಾರ್ತಿಕ
ಶುಕ್ಲ ತ್ರಯೋದಶಿ
ಮಂಗಳವಾರ
ತಾ॥ 9–11–1954

# ಚಂದ್ರಿಕಾ

## ಪಟ್ಟಣ ವಾಸಕ್ಕೆ

ಫಾಲ್ಗುಣ ಮಾಸ. ಬಿಸಿಲು ಬಲು ಕಡಿದಾಗಿ ಕಾಯುತ್ತಿದ್ದಿತು. ಶೇಷಜ್ಜಿ ಹೊರಬದಿಯ ಜಗುಲಿಯಲ್ಲಿ ಮಲಗಿಕೊಂಡು, ಅಪೂರ್ವವಾದ ರಾಗಗಳಿಂದ ಗೊರಕೆ ಬಿಡುತ್ತಿದ್ದರು. ಸ್ವಲ್ಪವೇಳೆಗೊಂದೊಂದುಬಾರಿ ತಾಟೀನಂಗೋ ಎಳನೀರೋ ಮಾರುವವರ ಕೊರಳದನಿಯ ಹೊರತು, ಮತ್ತೇನೂ ಸದ್ದಿಲ್ಲದೆ ಬೀದಿ ನೆಮ್ಮದಿಯಾಗಿತ್ತು. ಹಿಂದೆ ಹಟ್ಟಿಯಲ್ಲಿದ್ದ ಎಮ್ಮೆ ಕರು ಮಾತ್ರ "ಜೂಯ್ ಜೂಯ್" ಎಂದು ಪಲ್ಲವಿ ಹಾಡಿ ಕೊಂಡಿತ್ತು.

ಕೊಟಡಿಯಲ್ಲಿ ಮಲಗಿಕೊಂಡಿದ್ದ ಪತಂಜಲಿ ಶಾಸ್ತ್ರಿಗಳು ಎಮ್ಮೆ ಕರುವಿನ ಸದ್ದಿನಿಂದ ಎಚ್ಚರಗೊಂಡು ಜಡ ಮುರಿದುಕೊಳ್ಳುತ್ತ, "ಯಾರೇ ಅಲ್ಲಿ? ಕರುವಿಗೆ ಗಂಜಿ ಇಟ್ಟೆದೋ ಇಲ್ಲವೊ? ಬೈಹುಲ್ಲು ಹಾಕಿದೋ ಹೋಗಿ ನೋಡು" ಎಂದರು.

"ನಾನು ಕಾಫೀ ಬೀಜ ಹುರಿಯುತ್ತಿದ್ದೇನೆ. ಮಕ್ಕಳಾರಾದರೂ ಇದ್ದರೆ ಕರೀರಿ" ಎಂದು ಒಳಗಡೆಯಿಂದ ಉಚಿತ ಮರ್ಯಾದೆಯಿಂದ ಕಟ್ಟಳೆಯಿಟ್ಟಳು ಅವರ ಸಹಧರ್ಮಿಣಿ ಲಕ್ಷ್ಮಮ್ಮ.

"ನಿನಗೆ ಹೇಳಿದರೆ ನೀನು ನನಗೇ ಕೆಲಸ ಇಡುತ್ತೀ, ಸರಿ, ನಾನೇ ಎದ್ದು ಹೋಗುವೆ" ಎನ್ನುತ್ತ ಶಾಸ್ತ್ರಿಗಳು ಎದ್ದು ಕುಳಿತರು. ಅಷ್ಟರಲ್ಲಿ ಅವರ ಹಿರಿಯ ಮಗಳು ಕಲ್ಯಾಣಿ—"ಅಪ್ಪಾ, ಕೇದಗೆ ಹೂ ಕೋದು ಕೊಳ್ಳಲಿಕ್ಕಾಗಿ ಶಾಮಿ ಮಾಮನ ಮನೆಗೆ ಹೋದೆ. ಅತ್ತಿಗೆ ಕೈಯಲ್ಲಿ ಉಗುರಸುತ್ತು; ಕೋಡಿಮನೆ ಗೋಮತಿ ಹತ್ರ ಕೋದುಕೋ ಅಂದರು. ಅಷ್ಟು ದೂರ ಅಮ್ಮನ ಕೇಳದೆ ಹ್ಯಾಗೆ ಹೋಗೋದು ಅಂತ ತಿರುಗಿ ಬಂದುಬಿಟ್ಟೆ" ಎಂದಳು.

"ಸರಿ, ತುಂಬ ಗಟ್ಟಿಗಿತ್ತಿ. ಈ ಸುಡುವ ಬಿಸಿಲಿನಲ್ಲಿ ಓಡದೆ ಬಂದಿಯಲ್ಲ! ಅಕೋ, ಎಮ್ಮೆಕರಕ್ಕೆ ಬೈಹುಲ್ಲು ಹಾಕಿದ್ದಾನಾ ಹೋಗಿ ನೋಡು. ನೋಡಿ ನನಗೊಂದು ಲೋಟ ತಣ್ಣಗಿನ ನೀರು ತಕ್ಕೊಂಡು ಬಾ" ಎಂದರು ಶಾಸ್ತ್ರಿಗಳು.

ಇಷ್ಟರಲ್ಲಿ ಲಕ್ಷ್ಮಮ್ಮ ಕೈಕೆಲಸವನ್ನು ಮುಗಿಸಿಕೊಂಡು "ಯಾಕೆ ಕರೆದಿರಿ?" ಎಂದು ಕೇಳುತ್ತ, ಕೈಯಲ್ಲಿ ಬಾಚಣಿಗೆ, ಬಾಳೆಯ ನಾರು ಗಳೊಂದಿಗೆ ಬಂದು, ಚಾವಡಿಯ ಗೋಡೆಯ ಬದಿಯಲ್ಲಿ ಕುಳಿತಳು.

"ಏನಿಲ್ಲಾ, ನಮ್ಮ ಕಲ್ಯಾಣಿಯ ಗಂಡನನ್ನು ರಜೆಗೆ ಇಲ್ಲಿಗೆ ಬರಬೇಕೂ ಅಂತ ಬರೆದಿದ್ದೆನಷ್ಟೆ? ಅದಕ್ಕೆ ಈ ಹಳ್ಳಿಗಾಡಿನಲ್ಲಿ ತನಗೆ ಹೊತ್ತುಹೋಗದು; ಆದರೆ ತನಗೆ ಕಲ್ಯಾಣಿಯನ್ನು ನೋಡಬೇಕೆಂತ ಇರುವುದರಿಂದ, ನಾಗರಾಜನನ್ನೂ ಕಲ್ಯಾಣಿಯನ್ನೂ ಮದರಾಸಿಗೆ ಕಳಿಸಿಬಿಡೀ, ಅಂತ ಬರೆದಿದ್ದಾನೆ. ಇದಕ್ಕೇನು ಹೇಳುತ್ತಿ?" ಎಂದರು.

"ಚೆಂದಾಗಿದೆ! ಹೊತ್ತುಹೋಗದೆ ನಿಲ್ಲುತ್ತೆಯೆ? ಅದಕ್ಕಾಗಿ ಅವನೇನೋ ಹುಡುಗಾಟ ಮಾಡಿ ಬರೆದನೂ ಅಂದರೆ, ನನ್ನ ಬೇರೆ ಯೋಚನೆ ಕೇಳಬೇಕೆ? ತಾಯಿಯಾ ತಂದೆಯಾ ಕೇಳಿ ಮಾಡಲಿಕ್ಕೆ ಒಬ್ಬರೂ ದೊಡ್ಡವರಿಲ್ಲದೆ, ಈ ಚಿಕ್ಕ ಮಗು ಬೇರೆ ಮನೆಯಲ್ಲಿ ಹೋಗಿ ಏನು ಮಾಡೀತು?" ಎಂದು ಲಕ್ಷ್ಮಮ್ಮ ಹೇಳುತಿದ್ದಾಗ, ಹೊರ ಜಗುಲಿ ಯಲ್ಲಿ ಮಲಗಿದ್ದ ಶೇಷಜ್ಜಿ, "ಏನೋದೂ ಅಪ್ಪಾ (ಅಪ್ಪಾ ಎಂಬುದು ಶಾಸ್ತ್ರಿಗಳ ಕೊಂಡಾಟದ ಹೆಸರು), ಏನು ಸಂಗತಿ?" ಎಂದು ಕೇಳುತ್ತಾ ಎದ್ದು ಬಂದರು.

ಶಾಸ್ತ್ರಿಗಳು ವಿಷಯವನ್ನು ಹೇಳಲು,—"ಸಾಕಲ್ಲಾ ಸವರಣೆ! ಸೀಮೆ ಸೀಮೇ ಅಂತ ಕುಣಿಯುತ್ತಾ ಇದ್ದಾನೆ. ನಾನು ಬೇಡಾ ಅಂದರೆ ಬಿಟ್ಟೇರಾ? ಚೀಲಾ ಚೀಲಾ ಹಣಾ ಸುರ್ದೂ ಸುರ್ದೂ ಏನು ಕಲೆಕ್ಟರ ಕೆಲಸ ಬೇಕಾಗಿದೇ? ಅದೃಷ್ಟವಿದ್ದರೆ ಎಷ್ಟೋ ಮಂದಿ ಸಾಧಾರಣದವರು ಮೇಲೆಮೇಲೆ ಏರಿ ಜಿಲ್ಲಾ ಜಡ್ಜೀ ಕೆಲಸ ನೋಡಿಲ್ಲಾ? ನನ್ನಪ್ಪ ಕೂಡಾ ಜೋಡು ತಾಶಿಲ್ದಾರೀ ಮಾಡಿದ್ದಾರೆ. ತಾಶೀಲ್ದಾರ್ ಸುಂದರಮಯ್ಯರ್ ಎಂದರೆ ಅಳುವ ಮಗು ಬಾಯಿ ಮುಚ್ಚೀತು; ನಾಲಗೆಯಾಡಿದರೆ ನಾಡೇ

ಆಡೀತು. ಏನ್ನೋ ಕೆಲಸಾ ಕೆಲಸಾ ಅಂತ ಹಾರುತ್ತಾರಪ್ಪ ಈಗಿನ ದಿವಸದಲ್ಲಿ; ಪಕ್ಕದ ಮನೆ ಕಾಗೇಮರಿ ಕೂಡ ಗಣಿಸೋದಿಲ್ಲ. ಇಷ್ಟಕ್ಕೆ ನೂರು ನೂರಾಗಿ ಸುರಿದು ಕಲಿಯೋದು. ನಾನು ಹೇಳಿದರೆ 'ಅಜ್ಜಿ ಕೆಟ್ಟ ಪಿಸುಣಾರಿ: ಮನಸೇ ಬಾರದು' ಅಂತೀರಿ. ಕಲ್ತು ಕಲ್ತು ವಾಸುಮಾಡಿದ ಎಷ್ಟೋ ಮಂದೀನ ನೋಡಿಯಾಯ್ತು. ಬರೀ ಜಂಬ! ನಿಲ್ಲಲಿಕ್ಕೆ ನೆರಳಿಲ್ಲ, ಒರಗಲಿಕ್ಕೆ ಗೋಡೆಯಿಲ್ಲ; ಹೆಂಡತಿಗೆ ಬೆಂಗಳೂರು ಸೀರೇ ವಜ್ರದ ಬೆಂಡೋಲೆ ಹಾಕಿಬಿಡೋದು. ನಾವೆಲ್ಲಾ ನಮ್ಮಜ್ಜ ಲಕ್ಷ ಲಕ್ಷವಾಗಿ ನೇರಿಸಿಟ್ಟಾಗ ಕೂಡಾ ನಾದಾ ಓಲೇ ಬುಗಡೀಯೇ ಹಾಕಿಕೊಂಡಿದ್ದೆವು. ಪ್ರೂವಾಳೂರು ಸೀರೇ ಎಂಟು ರೂಪಾಯಿಗೆ ಮೇಲೆ ತಕ್ಕೊಳ್ಳೋದೇ ಇಲ್ಲ. ನಾ ಹೇಳೋದೆಲ್ಲಾ ಈಗ ಕಹಿಯಾಗಿದ್ದೀತು. ಮುಂದೆ ಒಂದು ಕಾಲದಲ್ಲಿ ನಾನು ಇಲ್ಲದೇಹೋದರೂ, 'ಶೇಷಿ ಹೇಳಿದಳು' ಅಂತ ನೆನವಾದೀತು. ಈ ಹುಡುಗರು ಹತ್ತನೇವರೆಗೆ ನನ್ನೊಲಕ್ಕೆ ಹೋಗಿ ಕಲೀಲಿ, ಅಷ್ಟರೊಳಗೆ ಪೇಪರ್ ಗೀಪರ್ ಓದಲಿಕ್ಕೆ ಬಂದುಬಿಡುತ್ತೆ. ಭೂಮಿ ಸಾಗುವಳಿ ಮಾಡಿ ಕೊಂಡು ಮನೆಮಾರು ನೋಡಿಕೊಂಡು ರಾಜಭೋಗವಾಗಿರಬಹುದೂ ಅಂದರೆ, 'ನಾನೇನೂ ಕಲೀಲಿಲ್ಲಾ, ಮಕ್ಕಳಾದರೂ ದೊಡ್ಡ ಓದು ಓದಲೀ' ಅನ್ನುತ್ತೀ. ಆ ಆನೇನಾದರೂ ಯಾಕೆ ಕೆಡಿಸಿಕೊಳ್ಳಬೇಕು? ಪಟ್ಟಣ ವಾಸದ ಸೌಕರ್ಯವನ್ನೂ ಕೊಂಚ ದಿನ ನೋಡಿದರಾಯಿತು. ಅಳಿಯನೂ ಜಿಲ್ಲಾ ಕಲೆಕ್ಟರ್ ಮಾಡಲೀ. ಆ ಹೆಮ್ಮೆ ನನಗೂ ಇಲ್ಲವೋ? 'ಪನಂಗುಡಿ ಪನಂಗುಡಿ' ಅಂತ ಇಷ್ಟು ದಿನ ಈ ಪನಂಗುಡೀಲಿ ಕಳೆದಾಯ್ತು. ಮಿಕ್ಕ ದಿನಗಳನ್ನು ಪಟ್ಟಣಕ್ಕೆ ಹೋಗಿ ಕೊಳಾಯಿ ನೀರಿನಿಂದಲೇ ಕಳೆದರ ತೀರಿತು" ಎಂದು ಹೇಳಿ ಮುಗಿಸಿದರು ಶೇಷಜ್ಜಿ.

ಅದಕ್ಕೆ ಶಾಸ್ತ್ರಿಗಳು, "ಅಮ್ಮ, ನೀನು ಹೇಳುವುದು ನಿಜವೇ. ಆದರೆ ಕಾಲಕ್ಕೆ ತಕ್ಕಹಾಗೆ ಅನುಸರಿಸಿಕೊಂಡು ಹೋಗಬೇಕಲ್ಲ? ನಾಗರಾಜ ಬಿ.ಎ. ಆನರ್ಸ್ ಕಲೀಬೇಕೂಂತ ಆಸೆಪಡುತ್ತಾನೆ. ಈ ಕಾಲದಲ್ಲಿ ಯಾರು ತಾನೇ ಕಲಿಯೋದಿಲ್ಲ? ಅವಲಕ್ಕಿಯಮ್ಮನ ಮಗ ಕೂಡ ಬಿ.ಎ. ಪಾಸಾಗಿ ದ್ದಾನೆ. ನಮ್ಮ ಮಕ್ಕಳಿಗೆ ಮಾತ್ರ ಅದೊಂದು ಕೊರತೆ ಯಾಕೆ ಹೇಳು?" ಎಂದರು.

ಶೇಷಜ್ಜಿಯಾಗಲಿ ಲಕ್ಷ್ಮಮ್ಮನಾಗಲಿ ಮತ್ತೇನೂ ಬಾಯಿ ತೆರೆಯಲಿಲ್ಲ. ಈ ಸಮಯದಲ್ಲಿ ಉಪಾಧ್ಯಾಯ ರಾಮಭದ್ರ ದೀಕ್ಷಿತರು ಬಂದು ಸೇರಿದರು.

"ಬನ್ನಿ ಬನ್ನಿ" ಎಂದು ಉಪಚರಿಸಿದರು ಪತಂಜಲಿ ಶಾಸ್ತ್ರಿಗಳು. ಲಕ್ಷ್ಮಮ್ಮ ಕೊಂಚ ಮರೆಯಾಗಿ, ಹಿಂಗಟ್ಟಿನ ನಡೆಯೆಡೆಯಲ್ಲಿ ಕುಳಿತು ಇವರ ಸಂಭಾಷಣೆಯನ್ನು ಆಲಿಸತೊಡಗಿದಳು.

"ಏನೋ ರಾಮೂ, ಅತ್ತಿ ಹೂ ಬಿಟ್ಟಹಾಗೆ! ಅಮಾವಾಸ್ಯೆಗೆ ನೋಡಿದರೆ ಇನ್ನೊಂದು ಅಮಾವಾಸ್ಯೆಗೆ ತಾನೇ ಬರುತ್ತೀ? ಏನು ಕೆಲಸವೋ? ಬಡ್ಡೀನೆಟ್ಟೀ ಬೆರಳು ಸುಮ್ಮನೆ ಆಡೀತೆ?" ಎಂದರು ಶೇಷಜ್ಜಿ.

ದೀಕ್ಷಿತರ ಮುಖ ಸಣ್ಣಗಾಯಿತು. "ಏನಮ್ಮ? ಒಂದೇ ಬಾರಿಗೆ ಬಡಿದುಹಾಕುವಿರಲ್ಲಾ! ನಾನೇನು ಹೊಸ ಮನುಷ್ಯನೆ? ನಾನೀಗ ಉಣ್ಣುವುದು ನಿಮ್ಮ ಅನ್ನವನ್ನೆ ಅಲ್ಲವೆ? ನಿಮ್ಮ ಆಶೀರ್ವಾದದಿಂದ ಬ್ರಹ್ಮಚಾರಿಯಾಗಿ ಓಡಿಬಂದ ನಾನು, ಎರಡು ಕಾಣಿ ನೆಲದ ಬಾಳುವೆಗಾರನಾಗಿ, ಈ ಪನಂಗುಡಿಯಲ್ಲಿ ನಾಲ್ಕು ಮಂದಿಯ ನಡುವೆ ಇರುವವನಾದೆ. ನೀವೇ ನನ್ನ ನೋಡಿ ಹೀಗೆ ಹೇಳಬಹುದೊ?" ಎಂದರು.

"ಎಲೋ, ಈ ಹಳೇದೆಲ್ಲಾ ನಿನ್ನೊಡನೆ ಯಾರಪ್ಪಾ ಕೇಳಿದ್ದು? ಈಗ ಬಂದ ಕೆಲಸವೇನೋ ಅದನ್ನು ಬಿಟ್ಟು ಬೇಡದ ಹರಟೇನೆಲ್ಲ ಮಾತಾಡಬೇಡಾ. ಎಲೋ ಅಪ್ಪಾ, ಪಂಚಾಂಗವನ್ನು ತೆಗಿ" ಎಂದರು ಶೇಷಜ್ಜಿ.

ಶಾಸ್ತ್ರಿಗಳು ತಮ್ಮ ಕಟ್ಟಿಗೆ ಮಣೆಯ ಬದಿಯಲ್ಲಿದ್ದ ಪಂಚಾಂಗವನ್ನು ತೆಗೆದು ದೀಕ್ಷಿತರ ಕೈಗೆ ಕೊಟ್ಟರು. ಯಾಕೆಂದು ತಿಳಿಯದೆ ಬೆಪ್ಪುನೋಟಕರಾದ ದೀಕ್ಷಿತರು ಪಂಚಾಂಗವನ್ನು ಕೈಯಲ್ಲಿ ಹಿಡಿದುಕೊಂಡು—"ಅತ್ತೆಮ್ಮನವರೇ, ನಿಮಗೇನು ನೋಡಬೇಕಾಗಿದೆ?" ಎಂದು ಕೇಳಿದರು.

"ಮದರಾಸಿನಲ್ಲಿ ಒಕ್ಕಲುತನ ಮಾಡಬೇಕು ಅಂತಾನೆ ನಮ್ಮಪ್ಪ. ಅದಕ್ಕೆ ಒಳ್ಳೆ ದಿವಸವಾಗಿ ಒಂದು ದಿವಸ ನೋಡಿ ಹೇಳು. ಅವನ ನಕ್ಷತ್ರ ಗೊತ್ತಷ್ಟೆ? ಅವಂದು ಸ್ವಾತಿ; ಅವಳದು ಉತ್ರಾಷಾಢ. ಚೆನ್ನಾಗಿ ನೋಡಿ ಹೇಳು" ಎಂದರು ಶೇಷಜ್ಜಿ.

"ನೋಡುತ್ತೇನೆ. ನಾನು ಕೇಳಲಿಕ್ಕೆ ಬಂದ ವಿಷಯವನ್ನು ನೀವೇ ಆರಂಭಿಸಿಬಿಟ್ಟಿರಿ. ನೀವು ಮದ್ರಾಸಿಗೆ ಹೋಗುವುದಾಗಿ ಗೋಪು ನನ್ನ ಹತ್ತಿರ ಹೇಳಿದ. ನನಗೇನೂ ಗೊತ್ತಿಲ್ಲಾ ಎಂದೆ. 'ಹೋಗೋ ಹೋಗು. ನಿನಗೆ ಗೊತ್ತಿಲ್ಲದೆ ಉಂಟೆ? ಸುಳ್ಳುಹೇಳುತ್ತಿ' ಎಂದ. ಕೇಳಿಬಿಡುವ ಅಂತಲೇ ನಾನು ಬಂದೆ" ಎಂದು ಹೇಳಿ, ಎಡಗೈಯ ಬೆರಳಿನಿಂದ ಗುಣಿಸುತ್ತ, ದೀಕ್ಷಿತರು ಪಂಚಾಂಗವನ್ನು ನೋಡಲಾರಂಭಿಸಿದರು.

ಇದುವರೆಗೆ ಮಾತಾಡದೆ ಇದ್ದ ಪತಂಜಲಿ ಶಾಸ್ತ್ರಿಗಳು—"ಚೈತ್ರ ಮಾಸ ಹದಿನೈದು ಹೇಗಿದೆ? ಹೇಳಿ" ಎಂದರು.

"ಅಣ್ಣ ನೋಡಿಟ್ಟೇ ನನ್ನ ಗೇಲಿ ಮಾಡುವುದೊ? ಅತ್ತೆಮ್ಮಾ, ಅಣ್ಣ ನೋಡಿದ ಮೇಲೆ ನಾನೂ ನೋಡಬೇಕೆ?....ನೀವು ಊರುಬಿಟ್ಟು ಹೊರಟುಹೋಗುವಿರೀ ಅಂದರೆ ನನಗೇನೋ ತುಂಬ ಕಷ್ಟವಾಗಿದೆ. ಸಾಕ್ಷಾತ್ ರಾಮಚಂದ್ರಮೂರ್ತಿಯೂ ಸರಿ, ಅಣ್ಣನೂ ಸರಿ. ಅವರು ಇಲ್ಲದೇ ಹೋದ ಈ ಪನಂಗುಡಿ, ರಾಮನಿಲ್ಲದ ಅಯೋಧ್ಯೆಯಂತೆಯೇ ಸರಿ. ಆದರೆ ಇದೆಲ್ಲಾ ಎದುರೇ ಹೇಳುವ ಮಾತಲ್ಲ; ನೀವು ಏನು ಅಂದು ಕೊಂಡರೂ ಸರಿ. ಅಣ್ಣಾ ಇಲ್ಲದೇ ಹೋದರೆ, ಊರೇ ಬೆಕೋ ಅಂತಾದೀತು" ಎಂದು ಸಿಲ್ಲಿಸಿದರು.

ಅಷ್ಟರಲ್ಲಿ ಶೇಷಜ್ಜ—"ಲಕ್ಷ್ಮೀ! ಲಕ್ಷ್ಮೀ! ಅಪ್ಪಾನಿಗೂ ರಾಮೂಗೂ ಮುರುಕ್ಕೂ ತೇಂಗೊಳಲೂ ತಕ್ಕೊಂಡು ಬಾರೇ" ಎಂದರು.

ಲಕ್ಷ್ಮಮ್ಮ ಎರಡು ಬೆಳ್ಳಿತಟ್ಟೆಗಳಲ್ಲಿ ಮುರುಕ್ಕು, ಸೀಡೆ, ತೇಂಗೊಳಲು ಮುಂತಾದುವುಗಳನ್ನು ತಂದಿಟ್ಟಳು. ಇಬ್ಬರೂ ಅವುಗಳ ಲೆಕ್ಕ ಮುಗಿಸ ಲಾರಂಭಮಾಡಿದರು.

ಶೇಷಜ್ಜ ಕಂಬಕ್ಕೊರಗಿ ಕಾಲುಬಿಡಿಸಿ ಕುಳಿತು ರಾಮಸ್ಮರಣೆ ಮಾಡುತ್ತಿದ್ದಂತೆ ಕಣ್ಣುಗಳನ್ನು ಮುಚ್ಚಿಕೊಂಡರು.

ತಿಂಡಿಯ ತಟ್ಟೆ ಖಾಲಿಯಾಗುತ್ತಲೇ, ದೀಕ್ಷಿತರು ನೀರುಮಜ್ಜಿಗೆ ಯನ್ನು ಕುಡಿದು,—"ಅಣ್ಣಾ, ನೀವು ಮದರಾಸಿಗೆ ಹೋಗುವುದಾದರೆ, ಬಂಡಿಯೆತ್ತು ಗೋಧನ ವ್ಯವಸಾಯಾದಿಗಳನ್ನೆಲ್ಲಾ ಯಾರ ಮೇಲು ವಿಚಾರಣೆಗೆ ಬಿಟ್ಟುಹೋಗುತ್ತೀರಿ? ಇಲ್ಲಿಂದ ಸಾಮಾನುಗಳಾಗಿಯೇ

ಬುಟ್ಟಿ ಒಂದೂ ಬಿಡದೆ ಭದ್ರವಾಗಿಟ್ಟುಕೋ. ಏ ಹುಡುಗ ಕಲ್ಯಾಣಿ! ನಿನ್ನ ಗಂಡನಿಗೆ ಏನುಬೇಕೋ ಅವುಗಳನ್ನೆಲ್ಲಾ ಒಬ್ಬರಿಗೂ ಗೊತ್ತಾಗದ ಹಾಗೆ ಪೆಟ್ಟಿಗೆ ಅಡಿಯಲ್ಲಿ ಬಚ್ಚಿಟ್ಟುಬಿಡು. ಓಡು, ಓಡು, ಬೇಗ!" ಎಂದು ಹೇಳಿ—"ಸೂರ್ಯನ ಮರಿಯ ಕತೆಯಹಾಗೆ ಏನಾದರೂ ಇಟ್ಟು ಕೊಂಡುಬಿಟ್ಟಾವು ಕಡೆಗೆ" ಎಂದರು.

"ಹೋಗೀ ಅಪ್ಪಾ! ಇದಕ್ಕಾಗಿಯೇ ಕರಿದಿರೇನೋ!" ಎಂದು ತಲೆ ತಗ್ಗಿಸಿಕೊಂಡು ಕಂಬದ ಮರೆಯಲ್ಲಿ ನಿಂತಳು ಕಲ್ಯಾಣಿ.

ಲಕ್ಷ್ಮಮ್ಮನಿಗೂ ಮತ್ತು ಮನೆಯಲ್ಲಿದ್ದೆಲ್ಲರಿಗೂ, ಇಷ್ಟು ದಿನದವರೆಗೆ ಪಳಗಿಬಂದ ಮನೆ–ತೋಟ–ಆಳುಕಾಳುಗಳನ್ನೆಲ್ಲಾ ಅಗಲಿಹೋಗಬೇಕಲ್ಲಾ ಎಂದು ಹೆಚ್ಚಿನ ದುಗುಡವಾಯಿತು.

*

*

# ಕಡಲ ಕರೆಯಲ್ಲಿ

ಸಾಯಂಕಾಲ ಐದು ಗಂಟೆಯಾಗಿದ್ದೀತು. ಮೇರಿಯರಸಿ ಕಲಾಶಾಲೆ ಗಿದಿರಾಗಿ, ಮಳಲಲ್ಲಿ ಮೊಣಕಾಲುಗಳನ್ನು ಕಟ್ಟಿಕೊಂಡು ಕುಳಿತು ಕಡಲನ್ನು ನೋಡಿದಂತೆ ಆಲೋಚನೆ ಮಾಡುತ್ತಿದ್ದರು ಪತಂಜಲಿ ಶಾಸ್ತ್ರಿಗಳು. ಕೊಂಚ ದೂರದಲ್ಲಿ ಲಕ್ಷ್ಮಮ್ಮ ಬೇರೆ ಹೆಂಗಳೆಯರೊಡನೆ ಮಾತಾಡುತ್ತ, ಕೈಗಳಿಂದ ಹೊಗೆಯನ್ನು ಅಳ್ಳಿಯಳ್ಳಿ ಕೆಳಗೆ ಬಿಡುತ್ತ, ಅಳಿಸಿ ಅಳಿಸಿ ಏನೋ ರಂಗೋಲಿ ಹಾಕುತ್ತ ಕುಳಿತಿದ್ದಳು. ಕಲ್ಯಾಣಿಯೂ, ಇತರ ಮಕ್ಕಳೂ, ಕಡಲತೆರೆಗೆ ಹೋಗಿ ಕಾಲ್ತೊಳೆಯಬೇಕೆಂದು ಹಟ ಮಾಡುತ್ತಿದ್ದುವು. ಶಾಸ್ತ್ರಿಗಳು ಏನು ಹೇಳುವರೋ ಎಂದು ಅವರ ಕಡೆಗೆ ತಿರುಗಿ ನೋಡಿದಳು ಲಕ್ಷ್ಮಮ್ಮ. ಅವರು ಕಣ್ಣುಮುಚ್ಚಿಕೊಂಡು ಚಿಂತಾಂಬುಧಿಯಲ್ಲಿ ಮುಳುಗಿರುವುದನ್ನು ಕಂಡುಕೊಂಡಳು.

ಕಲ್ಯಾಣಿ ಕಡಲತೀರಕ್ಕೆ ಹೋಗಿ, ನೊರೆದೆರೆಗಳು ಬಂದು ಕಾಲನ್ನಪ್ಪಳಿಸುವಂತೆ ನಿಂತು, ಮಿಕ್ಕ ಉತ್ಸಾಹದಿಂದ ತನ್ನೊಡನಾಡಿಗಳನ್ನು ಕರೆಯಲಾರಂಭಿಸಿದಳು. ಸುಂದರಿ ಕಲ್ಯಾಣಿಯನ್ನು ನೋಡಿ,—"ಏನಕ್ಕಾ, ಭಾವ ಮದರಾಸಿನ ವಿಕ್ಟೋರಿಯಾ ಹಾಸ್ಟಲಿನಲ್ಲಿ ಇದ್ದಾರೇ ಅಂತ ಹೇಳಲಿಲ್ಲವೊ? ಇದು ಮದರಾಸು ತಾನೆ? ಇಲ್ಲಿ ಕಾಣೋದಿಲ್ಲಲ್ಲಾ! ಯಾಕೆ ನಮ್ಮ ಮನೆಗೆ ಬರಲಿಲ್ಲ?" ಎಂದಳು.

ಸುಂದರಿಯ ಮಾತು ಕಲ್ಯಾಣಿಯ ಮನಸ್ಸನ್ನು ನೋಯಿಸಿತು. "ನಾಳೆಯೋ ನಾಡಿದ್ದೋ ಬರುತ್ತಾರೆ, ಮಾತಾಡದಿರೆ" ಎಂದು ಅವಳ ತಲೆಗೊಂದು ಪೆಟ್ಟು ಕುಟ್ಟಿದಳು. ಆದರೆ ತನ್ನೊಳಗೆ—"ನಾವು ಮದರಾಸಿಗೆ ಬರುತ್ತೇವೆ ಅಂತ ಕಾಗದ ಹಾಕಿರುವಾಗ, ನಮಗೆ ಮನೆಗಿನೆ ನೋಡಿ ಏರ್ಪಾಡು ಮಾಡದಿದ್ದರೂ, ಊರಲ್ಲಿ ಕೂಡ ಇಲ್ಲದೆ ಎಲ್ಲಿಗೋ ಹೋಗಿ ಕೂತುಬಿಟ್ಟರಲ್ಲ! ನಾಳೆಯಾದರೂ ಬಂದಾರೇನೊ! ಮಕ್ಕಳು ಕೇಳುವಾಗ ನಾಚಿಗೆಯೂ ದುಃಖವೂ ಉಂಟಾಗುತ್ತದಲ್ಲ!" ಎಂದು ಮರುಗಿಕೊಂಡಳು.

"ನನಗೆ ಪೆಟ್ಟುತ್ತೀಯಾ? ತಡಿ ತಡಿ, ಭಾವ ಬರಲೀ. ಹೇಳಿಕೊಟ್ಟು ನಿನಗೆ ಪೆಟ್ಟು ಕೊಡಿಸುತ್ತೇನೆ" ಎಂದು ಸುಂದರಿ ಕೈತಟ್ಟಿ ನಕ್ಕಳು.

ಅಷ್ಟರಲ್ಲಿ ಯಾರೋ ಒಬ್ಬರು ಹಿರಿಯವರು, ತುಸುದೂರದಲ್ಲಿ ಕೈ ತಟ್ಟುತ್ತ—"ಪತಂಜಲಿ! ಪತಂಜಲಿ!" ಎಂದು ಕರೆಯುವುದು ಕೇಳಿಸಿತು. ಶಾಸ್ತ್ರಿಗಳು ಕಣ್‌ಬಿಡಿಸಿ ನೋಡಿದರು. ಮೇಲುಮನೆ ಸೋಮಸುಂದರೈಯರ ತಮ್ಮ ಕೈಲಾಸಂನ ಮಾವನವರೆಂದರಿತು, ಎದ್ದು ಅತ್ತ ನಡೆದರು.

ಸಮೀಪಿಸಿ—"ನಮಸ್ಕಾರ ಮಾವಯ್ಯ. ಈಗ ಪಟ್ಟಣದಲ್ಲಿಯೇ ವಾಸವೊ?" ಎಂದು ಕೇಳಿದರು.

"ಇಲ್ಲಾ. ನನ್ನ ಅಳಿಯನ ಮಗಳಿಗೆ ವರ ಹುಡುಕಲಿಕ್ಕಾಗಿ ಬಂದಿದ್ದೇನೆ. ಅದಿರ್ಲಿ. ನಿನಗೀಗ ನೂರುವಯಸ್ಸು. ನಿನ್ನೆ ಸಾಯಂಕಾಲವೇ ನೀನು ಇಲ್ಲಿಗೆ ಬಂದದ್ದು ಗೊತ್ತಾಯಿತು. ಮುಖ್ಯವಾಗಿ ನಿನ್ನೊಡನೆ ಕೊಂಚ ಗುಟ್ಟಿನಲ್ಲಿ ಮಾತಾಡಲಿಕ್ಕಿತ್ತು. ಹುಡುಕುವ ಮೂಲಿಕೆ ಕಾಲ್ತೊಡಕಿದಂತೆ ಇಲ್ಲೇ ಸಿಕ್ಕಿದಿ."

"ಏನು ವರನ ವಿಷಯವೊ? ನಮ್ಮ ಹುಡುಗ ನಾಗೂಗೆ ಈಗ ಹದಿನೆಂಟು ವರ್ಷ ತಾನೇ ಆಗುತ್ತೆ?"

"ಅದು ಗೊತ್ತಿಲ್ಲವೋ ನನಗೆ? ಇದು ವರನ ವಿಷಯವಲ್ಲ; ಬೇರೆ ಕುಟುಂಬ ವಿಷಯ. ನಿನ್ನ ಕ್ಷೇಮಚಿಂತನೆಯಿಂದಲೇ ಹೇಳಲಿಕ್ಕೆ ಬಂದೆ. ನೀನು ಒಳ್ಳೆ ಹುಡುಗ; ವೆತ್ಯಾಸವೇನೂ ತಿಳಿದುಕೊಳ್ಳಲಾರೀ ಅಂತ ಗೊತ್ತುಂಟು. ಆದರೆ ನಾನು ಹೇಳಲಿಕ್ಕಿರುವ ವಿಷಯವನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡು, ನೀನಾಗಿ ಪರೀಕ್ಷಿಸಿ ನೋಡಿ, ನಾನು ಹೇಳಿದ್ದು ಸರಿಯೋ ತಪ್ಪೋ ಕಂಡುಹಿಡಿಯಬೇಕು. ಬೇರಾರಿಗೂ ತಿಳಿಯಬಾರದು."

"ವಿಷಯ ಇಂಥಾದ್ದಂತ ಹೇಳದೆ ಪೀಠಿಕೆ ಬಲವಾಗಿ ಹಾಕಿಬಿಟ್ಟಿರಲ್ಲಾ! ಸುತ್ತಿ ಬಳಸದೆ ನೇರಾಗಿ ಒಡೆದು ಹೇಳಿಬಿಡಿ."

ಈಶ್ವರಯ್ಯರು ಹೀಗೆಂದು ಹೇಳತೊಡಗಿದರು :—

"ನಿನ್ನ ಅಳಿಯನಿಗೆ 'ಚೋಳಬಂದಾ'ದಲ್ಲಿ ಕೊಂಚ ಭೂಮಿ ಇತ್ತಲ್ಲಾ ಗೊತ್ತಿದೆಯೋ? ಅದನ್ನೂ 'ಕುರುವಿತ್ತುರೆ'ಯ ಭೂಮಿಯನ್ನೂ ಕಾ. ಮು. ಪ. ವ. ವೆಳ್ಳಾಯಶೆಟ್ಟಿಗೆ ಅಡವುಹಾಕಿ, ರೂಪಾಯಿ ೫,೫೦೦ ಸಾಲ ಪಡೆದುಕೊಂಡಿದ್ದಾನೆ. ಆಳು ನೋಡಿದರೆ ಹ್ಯಾಗಿದ್ದಾನೆ! ಸಾಕ್ಷಾತ್ ದೊರೆಯ ಮಗ ಕೆಟ್ಟ. ಬಾಯಿಯಲ್ಲಿ ಯಾವಾಗ ನೋಡಿದರೂ ಚುಟ್ಟಾ.

ನೋಡಿದರೆ ಸಹಿಸಲಿಕ್ಕಾಗದು. ಈ ಲಕ್ಷಣದೊಂದಿಗೆ ಇನ್ನೊಂದು ಕುಣಿತ ಬೇರೆ. (ಸಮೀಪಿಸಿ ಮೆಲ್ದನಿಯಿಂದ) ಯಾರೋ ಒಬ್ಬಳು ಸಿನಿಮಾದಲ್ಲಿ ಆಡುವವಳಂತೆ; ನಮ್ಮ ತೆಂಕುಮನೆಯ ವಿಧವೇ ಹೆಂಗುಸಂತೆ. ಮತ್ತೆ ತಲೆಗೂದಲೆಲ್ಲಾ ಬೆಳೆಸಿಕೊಂಡು ಕುಂಕುಮ ಇಟ್ಟು 'ಮಿಸ್ ಲೀಲಾ' ಅಂತ ಹೆಸರಿಟ್ಟುಕೊಂಡು ಮೆರೆದಾಡ್ತಾಳೆ. ಅವಳೊಟ್ಟಿಗೆ ನಿನ್ನ ಅಳಿಯನೂ, ಮರುಂಗಾಪುರೀ ವೈನರನೂ, ಇನ್ನೊಬ್ಬ ಪೋಲೀವಾಲನೂ ಕೂಡಿಕೊಂಡು ಬೀಚ್ ರೋಡಿನಲ್ಲಿ ನಡೆಯುತ್ತಿದ್ದರಂತೆ. ಆ ವೈನರ್ ಪೂರ್ತಿಯಾಗಿ ಕುಡಿದುಬಿಟ್ಟಿದ್ದ. ಎದುರುಬಂದ ಒಂದು ಆಂಗ್ಲೋ ಇಂಡ್ಯನ್ನನ ಕಾರಿಗೆ ತಾಗಿ, ಕಾರು ತೌಡುಪುಡಿಯಾಗಿ ಅವಳಿಗೂ ವೈನರನಿಗೂ ಭಾರೀ ಗಾಯ ವಂತೆ. ಇವನು ಹಾರಿ ಓಡಿಬಂದು ಹಾಸ್ಟಲಿನೊಳಗೆ ಅಡಗಿಕೊಂಡನಂತೆ. ದೊಡ್ಡ ಕೇಸಾಗಿ ಭಾರಿ ಗದ್ದಲವಾಗುತ್ತಿತ್ತು. ಮರುಂಗಾಪುರಿಯವನು ಸಾವಿರ ಸಾವಿರ ಸುರಿದು ಈ ವಿಷಯ ಹೊರಗಾಗದಂತೆ ಮುಚ್ಚಿಬಿಟ್ಟ. ನೀನು ಪಾಪ, ದೇವರೇ ಅಂತ ಒಳಗೇ ಕೂತಿದ್ದಿ. ಅಳಿಯನ ಹುಡುಗಾಟದ ಕತೆ ಹೀಗಿದೆ! ನಾನು ಹೇಳಿದ್ದೂ ಅಂತ ಯಾರಿಗೂ ಹೇಳಬೇಡ. ಮುಂದೆ ಹೇಗೆ ನಡೆಯುವುದಂತ ಯೋಚಿಸಿ ನೋಡಿಕೊ. ನಾನೇನು ಹೇಳಲಿನ್ನು?"

ಪತಂಜಲಿ ಶಾಸ್ತ್ರಿಗಳಿಗೆ ಅಡಿಪೊಡೆಯೊಳಗೆ ಸಿಡಿಲುಬಿದ್ದ ಹಾಗಾಯಿತು. ಏನು ಮಾಡುವುದೆಂದು ಗೊತ್ತಾಗದೆ ಬಿಸಿಗೆ ಬಿದ್ದ ಹುಳುವಿನಂತೆ ಚಡಪಡಿಸಿ ದರು. "ಲಕ್ಷ್ಮಿಗೆ ಹೇಳಲೋ ಬೇಡವೊ? ಕಲ್ಯಾಣಿಗೆ ತಿಳಿಸಲೇಬಾರದು" ಎಂದು ಬಗೆಬಗೆಯಾಗಿ ತಮಗೆ ತಾವೇ ಆಕ್ಷೇಪ–ಸಮಾಧಾನಗಳನ್ನು ಹೇಳಿಕೊಂಡರು.

* * *

ಅಂದಿನಿರುಳು ಪತಂಜಲಿ ಶಾಸ್ತ್ರಿಗಳು ನಿದ್ದೆಬಾರದೆ ಯೋಚನೆ ಮಾಡುತ್ತಾ ಹಾಸಿಗೆಯಲ್ಲಿ ಹೊರಳಾಡಿಕೊಂಡಿದ್ದರು. ಶೇಷಜ್ಜಿ ಕೋಣೆ ಯೊಳಗೆ ಹಲಗೆ ಮಂಚದ ಮೇಲೆ ಮಲಗಿ ನಿದ್ರಿಸಿಕೊಂಡಿದ್ದಳು. ಲಕ್ಷ್ಮಮ್ಮ ಅಡುಗೆ ಮನೆಯನ್ನು ಶುದ್ಧಮಾಡಿ, ಮಕ್ಕಳನ್ನು ಒತ್ತರೆಯಾಗಿ ಮಲಗಿಸಿ, ಹೊದೆಯರುವೆಯನ್ನು ಹೊದಿಸಿ, ಬಚ್ಚೆಯ ತಟ್ಟೆಯನ್ನು ಎತ್ತಿಕೊಂಡು

ಮಂಚದ ಬಳಿಗೆ ಬಂದು "ಅಬ್ಬ" ಎಂದು ಶ್ವಾಸಬಿಟ್ಟು ಕಾಲು ಬಿಡಿಸಿಕೊಂಡು ಕುಳಿತಳು.

ಅವಳು ವೀಳ್ಯವನ್ನು ಮೆಲ್ಲುವವರೆಗೂ ಕಾದಿದ್ದ ಶಾಸ್ತ್ರಿಗಳು, ತಣಿದ ದನಿಯಿಂದೆಂದರು—"ಕಲ್ಯಾಣಿಗೆ ನಿದ್ರೆಬಂತೆ? ನಾಗುವೂ ಸುಂದರಿಯೂ ನಿದ್ರಿಸಿದರೆ?"

"ಆಹಾಹಾ! ಏನು ಇಷ್ಟು ಅಕ್ಕರೆಯಿಂದ ವಿಚಾರಿಸುತ್ತೀರಿ? ಸಾಯಂಕಾಲದಿಂದ ಯಾಕೋ ಒಂದು ರೀತಿಯಾಗಿದ್ದೀರಿ? ಏನು? ಮೈ ಸರಿಯಿಲ್ಲವೆ?" ಎಂದಳು ಲಕ್ಷ್ಮಮ್ಮ.

"ಮೈ ಸರಿಯಾಗಿಯೇ ಇದೆ; ಮನಸ್ಸು ಮಾತ್ರ ಸರಿಯಿಲ್ಲ. ಆ ಬಾಗಿಲನ್ನು ಹಾಕು. ನಮ್ಮ ಮಾತು ಕಲ್ಯಾಣಿಯ ಕಿವಿಗೆ ಬಿದ್ದೀತು" ಎಂದರು.

ಲಕ್ಷ್ಮಮ್ಮ ಎದ್ದುಹೋಗಿ ಬಾಗಿಲು ಹಾಕುವಾಗ, ಬಿಜಾಗರೆಗೆ ಎಣ್ಣೆ ಬಿಡದೆ ಬಹು ದಿನಗಳಾದುದರಿಂದ "ಕಿರೀಚ್" ಎಂಬ ಶಬ್ದವುಂಟಾಯಿತು. ಇವಳು ಅದನ್ನು ಲಕ್ಷ್ಯಮಾಡದೆ ಬಾಗಿಲು ಹಾಕಿಬಂದು ಕುಳಿತಳು.

ಅರೆನಿದ್ದೆ–ಅರೆಯೆಚ್ಚರದಲ್ಲಿದ್ದ ಕಲ್ಯಾಣಿಯ ಕಿವಿಗೆ ಇವರ ಮಾತು ಸ್ವಪ್ನದಲ್ಲಿ ಕೇಳುವಂತೆ ತೋರಿತು. ಬಾಗಿಲು ಕೀಚಿಡುತ್ತಲೇ ಚೆನ್ನಾಗಿ ಎಚ್ಚೆತ್ತು, ಬಾಗಿಲ ಬಳಿಗೇ ಬಂದು ನಿಂತು ಒಳಗಿನ ಮಾತನ್ನು ಆಲಿಸಲಾರಂಭಿಸಿದಳು.

ಊರಸದ್ದು ಅಡಗಿತ್ತು. ನಿಡುದೂರದಲ್ಲಿದ್ದ ಇಗರ್ಜಿಯ ಗಂಟೆ 'ಡಾಂಗ್ ಡಾಂಗ್' ಎಂದು ಹನ್ನೆರಡು ಹೊಡೆಯಿತು. ಶಾಸ್ತ್ರಿಗಳು ಯಾವುದು ಹೇಳುವುದು, ಹೇಗೆ ಆರಂಭಿಸುವುದು ಎಂದು ತಿಳಿಯದೆ ಸ್ವಲ್ಪ ಹೊತ್ತು ತಡೆದು ಸುಮ್ಮನಿದ್ದರು. ಅನಂತರ ಹೇಗೋ ಒಮ್ಮೆ ಆರಂಭಿಸಿದರು. ಅವರಂದ ಮಾತುಗಳು ಕಲ್ಯಾಣಿಯ ಕಿವಿಗೆ ಚೆನ್ನಾಗಿ ಬಿದ್ದುವು. "ಸಾಯಂಕಾಲ ಬೀಚಿಗೆ ಈಶ್ವರಯ್ಯರು ಬಂದಿದ್ದರಷ್ಟೆ? ಅವರು ನಿನ್ನ ಅಳಿಯನ ವಿಷಯ ನಾವು ನೆನೆಯದ್ದೆಲ್ಲಾ ಹೇಳಿದರು. ಈಶ್ವರಯ್ಯರು ಬಹಳ ಒಳ್ಳೆಯವರು. ಸುಮ್ಮನಾದರೂ ಸುಳ್ಳು ಹೇಳುವಂತವರಲ್ಲ. ನಮ್ಮ ದುರದೃಷ್ಟಕ್ಕೆ ಯಾರೇನು ಮಾಡಿಯಾರು? ನೀನೇನೋ ಅಳಿಯ 'ಆನೆ–ಕುದುರೆ, ಇಂದ್ರ–ಚಂದ್ರ' ಅಂತ ಹೆಮ್ಮೆ ಕೊಚ್ಚುಕೊಂಡಿ. ಯಾವ

ಮೂದೇವಿಗಳ ಮಾತನ್ನೋ ಕೇಳಿ, ಕೊಳಕು ಗುಳಿಯಲ್ಲಿ ಕಾಲುಹಾಕಿ ಯಾಯಿತು. ಇನ್ನೇನುತಾನೇ ಮಾಡುವುದು? 'ನನ್ನ ಅಳಿಯನಿಗೆ ಅದು ಗೊತ್ತು ಇದು ಗೊತ್ತು' ಎಂದೆಲ್ಲಾ ಹೆಚ್ಚಳಪಟ್ಟೆ. ಅದೇ ಈಗ ಭಾರೀ ಚೆಂದಾಗಿದ್ದಾನೆ. ದೊರೆರಾಯರಿಗೀಗ ಚುಟ್ಟಾ ಸೇದಲಿಕ್ಕೆ ಗೊತ್ತುಂಟಂತೆ. ಸೂಳೆಗೇರಿಗೆ ಹೋಗಲಿಕ್ಕೆ ಕೂಡ ಗೊತ್ತುಂಟಂತೆ! ಆಹಾ! ಎಂಥ ಅದ್ಭುತ ವಾದ ಅಳಿಯ ಬಂದುಬಿಟ್ಟನಪ್ಪ! ಕೇಳಿ ಕೇಳಿದಂತೆ ಮೈ ಒಂದು ಗೇಣಾಗಿ ಕುಂದುತ್ತದಲ್ಲ! ಸಾಧಾರಣವಾಗಿದ್ದವನಾದರೆ, ನಾವು ಮದರಾಸಿಗೆ ಬರು ವುದು ಗೊತ್ತಿದ್ದೂ ಬೇರೆ ಊರಿಗೆ ಹೊರಟುಹೋಗುತ್ತಿದ್ದನೋ! ಛೀ! ಏನು ಕರ್ಮವೋ ಏನೊ!" ಎಂದು ಮರುಂಗಾಪುರೀ ಮೈನರನ ಸಂಬಂಧ ವಾಗಿ ಕೇಳಿದ ಆ ಸಂಭವವನ್ನೂ ಹೇಳಿದರು.

ಲಕ್ಷ್ಮಮ್ಮನಿಗೆ ಏನೂ ಬೆಳಗದೆಹೋಯಿತು. ಆಶ್ಚರ್ಯದಿಂದ, "ಏನಿದೂ! ನಿಜವಾಗಿಯೂ ಇದ್ದೀತೇ? ಇಂಥಾ ಸಂಗತಿಗಳನ್ನೆಲ್ಲಾ ಕೇಳಿದವರ ಮಾತನ್ನು ಕೇಳಿ ನಂಬಬಹುದೋ? ಈಶ್ವರಯ್ಯ ವಗೈರೇ ಯಾರೊಡನೆಯೋ ಇವನಿಗೆ ಮನಸ್ತಾಪ ಏರ್ಪಟ್ಟಿದ್ದೀತು. ಆದ್ದರಿಂದ ಹೀಗೆಲ್ಲಾ ಜೋಡಿಸಿ ಹೇಳಿ ಮಿತ್ರಭೇದ ಮಾಡಲಿಕ್ಕಿದ್ದಾರೋ ಏನೋ. ಯಾರ ಗುಣ ಹ್ಯಾಗೇ ಅಂತ ನಾವು ನಿಶ್ಚಯವಾಗಿ ಹೇಳೋದು?" ಎಂದಳು.

"ನಿನಗೆಲ್ಲಾ ಸಂದೇಹವೇ. ಅದೆಂಥಾ ವಿರೋಧವೇ ಇದ್ದರೂ, ಹುಡುಕಿ ಹಿಡಿದು ಒಬ್ಬನನ್ನು ಕುರಿತು ನಿಂದಿಸುವವರು ಈಶ್ವರಯ್ಯರಲ್ಲ" ಎಂದರು ಶಾಸ್ತ್ರಿಗಳು.

"ಬೆಳಗಾದರೆ ತಿಳಿದೀತು ಅಳಿಯನ ಕುರುಡು. ಅಷ್ಟರೊಳಗೆ ನಾವೇಕೆ ವಾದ ಮಾಡೋದು?" ಎಂದು ಲಕ್ಷ್ಮಮ್ಮ ಪೇರುಸಿರಿಟ್ಟಳು.

ಕಲ್ಯಾಣಿ ಎಲ್ಲವನ್ನೂ ಕೇಳಿದಳು. ಏನು ಮಾಡುವಳು ಪಾಪ! ಕಾರ್ಗಾಲದ ಸುಯ್‌ಗಾಳಿಗೆ ಸಿಕ್ಕಿಬಿದ್ದ ಒಣಹುಲ್ಲುಕಡ್ಡಿಯಂತೆ ಅವಳ ಮನಸ್ಸು ನಡನಡುಗುತ್ತಿತ್ತು. ಎದೆ ಒಂದೇಸವನೇ ಹೊಡೆಯತೊಡಗಿತ್ತು. ಅತ್ತತ್ತು ತಲೆಗಿಂಬೆಲ್ಲಾ ನೆನೆಯಿತು. ತಾನೆಷ್ಟೋ ಮನಸ್ಸಿನಲ್ಲಿ ಕೋಟೆ ಕಟ್ಟಿದ್ದೆಲ್ಲಾ ಒಂದೇ ಕ್ಷಣದಲ್ಲಿ ನೆಲಸಮವಾದುದನ್ನು ನೆನೆನೆನೆದು, ಅವಳ ಹೃದಯವು ಫಡಿಫಡೀರೆಂದು ಚಮ್ಮಟಿಯೇಟನಂತೆ ಹೊಡೆಯ ತೊಡಗಿತು.

ಹೊರಳಿ ಹೊರಳಿ ಮಲಗುವುದೂ, ಎದ್ದು ಕೂಡುವುದೂ, ಮತ್ತೆ ಮಲಗಿ ಒಳಗೊಳಗೇ ಮಿಗಿಮಿಗಿದು ಅಳುವುದೂ, ಹೀಗೆ ತವಿಸತೊಡಗಿದಳು.

ನಟ್ಟಿರುಳು. ನಿದ್ದೆ ಬಾರದೆ ಒಬ್ಬಳೇ ಎಚ್ಚೆತ್ತಿರಲು ಅಂಜಿ, ತತ್ತಳಿಸುತ್ತ, ತಾಯಿಯನ್ನು ಎಬ್ಬಿಸೋಣವೆಂದು ಎದ್ದಳು. ಎಬ್ಬಿಸಿದರೆ ಏನಾದರೂ ಕಾರಣ ಹೇಳಬೇಡವೆ? ಈ ಸಂಗತಿ ನಾನು ತಿಳಿದಿರುವಂತೆ ತೋರಿಸುವುದೇ ಬೇಡ. ಏನು ನಡೆಯುವುದೋ ನೋಡೋಣ. ಹ್ಯಾಗಿದ್ದರೂ ನಾಳೆ–ನಾಡಿದ್ದಾದರೂ ಬಾರದೆಹೋದಾರೆ?'' ಎಂದು ನೆನೆದುಕೊಂಡು ಮತ್ತೆ ಹಾಸಿಗೆಯಲ್ಲಿಯೇ ಮಲಗಿದಳು.

ಕೋಣೆಯೊಳಗಿನ ಗಡಿಯಾರವು ನಾಲ್ಕುಗಂಟೆ ಹೊಡೆಯಿತು. ''ಸರಿ. ನಾಲ್ಕಾಯಿತು ಗಂಟೆ! ಇನ್ನುಮೇಲೆ ನಿದ್ದೆ ಬಂದೀತೆ? ಬೆಳಗಾಗುತ್ತಲೇ ಅವರು ಬಂದುಬಿಡಬಾರದೆ? ಬಂದು ಏನಾದರೂ ಸಮಾಧಾನ ಹೇಳಲಾರರೊ?'' ಎಂದು ಎಣಿಸುತ್ತಿದ್ದಂತೆಯೇ ಅವಳ ಕಣ್ಣೆವೆ ಮುಚ್ಚಿಕೊಂಡಿತು.

* * *

ಬೆಳಗ್ಗೆ ಗಂಟೆ ಏಳು. ಪತಂಜಲಿ ಶಾಸ್ತ್ರಿಗಳು ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು, ಹೊರಜಗುಲಿಯಲ್ಲಿ ಎಡತಾಕುತ್ತ ಯೋಚನೆ ಮಾಡುತ್ತಿದ್ದರು. ಒಬ್ಬ ಸಣ್ಣವನು ಸೈಕಲಲ್ಲಿ ಬಂದಿಳಿದು ''ಪನಂಗುಡಿಯಿಂದ ಬಂದಿದ್ದಾರಲಾ, ಇದೇ ಮನೆಯೊ?'' ಎಂದು ಕೇಳಿದ.

ಇವರು ''ಹೌದೆ''ನ್ನುತ್ತಲೇ ''ನಿಮ್ಮ ಅಳಿಯನವರು ಒಂದು ಪತ್ರ ಬರೆದು ಕೊಟ್ಟುಕಳಿಸಿದ್ದಾರೆ'' ಎಂದಂದು ಒಂದು ಕವರನ್ನು ನೀಡಿದನು. ಶಾಸ್ತ್ರಿಗಳು ಅತ್ಯಾತುರದಿಂದ ಅದನ್ನು ಪಡೆದೊಡೆದು ಬಿಡಿಸಿ ಓದತೊಡಗಿದರು :—

''ಮಾವಯ್ಯನವರಿಗೆ ಗೋಪಾಲನು ಮಾಡುವ ಸಾಷ್ಟಾಂಗ ನಮಸ್ಕಾರ. ಉಭಯಕ್ಷೇಮೋಪರಿ. ನಿಮ್ಮ ವಿಳಾಸವು ಸರಿಯಾಗಿ ಗೊತ್ತಾಗದ್ದರಿಂದ, ನನ್ನ ಸ್ನೇಹಿತನಿಗೆ ಈ ಕಾಗದವನ್ನು ಕಳುಹಿಸಿ, ನಿಮಗೆ ಮುಟ್ಟಿಸಬೇಕೆಂದು ಹೇಳಿದ್ದೇನೆ. ಕಲ್ಯಾಣಿಯೂ ಉಳಿದ ಮಕ್ಕಳೂ ಕ್ಷೇಮವಾಗಿರುವರೆಂದು ನಂಬುವೆ. ನನ್ನ ಸ್ನೇಹಿತ ಶಂಕರನಿಗೆ ಸಿಡುಬೆದ್ದು ಹಾಸ್ಪಟಲಿನಲ್ಲಿರಲಾಗದ್ದರಿಂದ, ಮತ್ತು ಇದು

ಕಾರ್ಪರೇಶನ್ನಿಗೆ ಗೊತ್ತಾದರೆ ಅಂಟುರೋಗದಾಸ್ಪತ್ರೆಗೆ ಒಯ್ದು ಬಿಡುವರಾದುದರಿಂದ, ಅವನು ತಿರುಕ್ಕಳುಕ್ಕುಂದ್ರದಲ್ಲಿರುವ ತನ್ನ ಹತ್ತಿರದ ಬಳಿಗೆ ತನ್ನನ್ನೊಯ್ದು ಸೇರಿಸಬೇಕೆಂದು ತುಂಬ ಬೇಡಿ ಕೊಂಡದ್ದರಿಂದ, ಅವನನ್ನು ಟ್ಯಾಕ್ಸಿ ಮಾಡಿ ಇಲ್ಲಿಗೆ ಕರಕೊಂಡು ಬಂದೆ. ನಾನೂ ಉಳಿದವರೂ ಪತ್ತೆ ದಾಕುಹಾಕಿಸಿಕೊಂಡಿದ್ದೇವೆ. ನನ್ನನ್ನು ಕುರಿತು ನೀವಾರೂ ಏನೂ ಚಿಂತಿಸಬೇಡಿರಿ. ನಾನು ಇನ್ನು ಎರಡು ದಿನಗಳಲ್ಲಿ ಹೊರಟುಬರುತ್ತೇನೆ. ಮಾತುಶ್ರೀ ಅಜ್ಜಿ ಯವರಿಗೂ ಅತ್ತೆಯವರಿಗೂ ನಮಸ್ಕಾರ. ಮಕ್ಕಳಿಗೆ ನನ್ನ ಪ್ರೀತಿಯ ಮುತ್ತುಗಳು. ಇಂತು ಬೇಡುವ ಆಶೀರ್ವಾದ.

**ಗೋಪಾಲ.''**

ಓದಿ ಮುಗಿಸುತ್ತಲೇ, ''ಅಯೋಗ್ಯ! ಬರಲಿ! ಹೇಳುವೆನು! ಏನು ಸಾಹಸ!'' ಎಂದು ತಮ್ಮೊಳಗೆ ತಾವೇ ಮುಣ್ಮುಣಿಸಿಕೊಂಡರು. ಆದರೂ ಕಲ್ಯಾಣಿಗೂ ಅಜ್ಜಿಗೂ ಒಂದು ಸಮಾಧಾನವಾಗಿರಲೆಂದುಕೊಂಡು, ''ಅಮ್ಮಾ ಕಲ್ಯಾಣಿ! ಇಕೊ, ಅಳಿಯನಿಂದ ಕಾಗದ ಬಂದದೆ. ಅಜ್ಜಿಗೆ ಓದಿ ಹೇಳು'' ಎಂದರು.

ಶಾಸ್ತ್ರಿಗಳು ತಮ್ಮ ಕುಮಾರ ನಾಗರಾಜನನ್ನು ಏಕಾಂತಕ್ಕೆ ಕರೆದೊಯ್ದು, ತಾವು ಕೇಳಿದುದನ್ನೆಲ್ಲ ಸಂಕ್ಷೇಪವಾಗಿ ಹೇಳಿ, ''ನಾಗು, ಯಾವುದಕ್ಕಾಗಿ ಇದನ್ನು ನಿನ್ನೊಡನೆ ಹೇಳಿದೆ ಗೊತ್ತೊ? ನೀನು ಯಾರೆಂಬು ದನ್ನು ತೋರಿಸಿಕೊಳ್ಳದೆ, ಎರಡು ಮೂರು ದಿನಗಳಲ್ಲಿ ನಿಜಸಂಗತಿಗಳನ್ನು ಪತ್ತೆಹಚ್ಚಿ ತಿಳಿಸಬೇಕು. ಈ ವಿಷಯವನ್ನು ನಿನ್ನ ಜವಾಬ್ದಾರಿಗೆ ಬಿಟ್ಟಿ ದ್ದೇನೆ. ನೀನು ಯಾರನ್ನು ನೋಡುತ್ತಿ ಏನು ಮಾಡುತ್ತಿ ಎಂಬುದೊಂದೂ ನನಗೆ ಗೊತ್ತಿಲ್ಲ. ಅವನು ಬರುವುದರೊಳಗೆ ಅವನಿಗೆ ಸಂಬಂಧಿಸಿದ ಸಮಾಚಾರಗಳನ್ನು ಸೂಜಿಮೊನೆಯಷ್ಟು ಕೂಡ ಬಿಡದೆ ನನಗೆ ತಿಳಿಸಿ ಯಾಗಬೇಕು. ನಿನ್ನ ಬುದ್ಧಿಗೆ ಹೇಗೆ ಮಾಡುವುದು ಉಚಿತವೆಂದು ತೋರುವುದೋ ಹಾಗೆ ಮಾಡು. ನಮ್ಮ ಮಗುವಿನ ಕ್ಷೇಮವನ್ನು ಕುರಿತು, ಇದಿಷ್ಟು ಮಾಡುವುದು ನಿನ್ನ ಕರ್ತವ್ಯ, ಏನು? ನಾನು ಹೇಳುವುದು ತಿಳಿಯಿತೆ?'' ಎಂದರು.

# ಅಳಿಯನ ಆಗಮನ

ಅಂದು ಶುಕ್ರವಾರ. ಕಲ್ಯಾಣಿಯೂ ಸುಂದರಿಯೂ ಎಣ್ಣೆಹಾಕಿ ಎರೆದುಕೊಂಡು, ತೋಟಕ್ಕೆ ಹೋಗಿ ಏನೇನೋ ಮಾತಾಡಿಕೊಳ್ಳುತ್ತ ಹಸಿ ತಲೆಯನ್ನು ಆರಿಸಿಕೊಳ್ಳುತ್ತಿದ್ದರು. ಮನೆಯ ಮುಂದೆ ಮೋಟಾರು ಕಾರು 'ಭಂ–ಭಂ' ಎಂದು ಸದ್ದುಮಾಡಿತು. ಪಕ್ಕಾ ಆಂಗ್ಲೇಯನಂತೆ ಉಡುಗೆಯುಟ್ಟ ಅಳಿಯ ಮೋಟಾರಿನಿಂದಿಳಿದನು. "ಅಕ್ಕಾ! ಅಕ್ಕಾ! ಭಾವ ವೇಷ ಹಾಕಿಕೊಂಡು ಬಂದರೂ!" ಎಂದು ಕೂಗಿದಳು ಶ್ಯಾಮಳೆ. ನಗುಮೊಗನಾಗಿ ಗೋಪಾಲನು ಮನೆಯೊಳಗೆ ಹೊಕ್ಕನು.

ಶಾಸ್ತ್ರಿಗಳು ಉಕ್ಕಿಬರುವ ಕೋಪವನ್ನು ಹತ್ತೊತ್ತಿಕೊಳ್ಳುತ್ತ, "ಬಾ ಬಾ ಕೂತುಕೊ" ಎಂದು ಉಪಚರಿಸಿದರು. "ಬಾರಪ್ಪಾ. ಆರೋಗ್ಯವಾಗಿದ್ದೀಯಾ?" ಎಂದು ಕೇಳುತ್ತ ಶೇಷಜ್ಜಿಯೂ ಬಂದರು.

"ಅಮ್ಮಾ ಕಲ್ಯಾಣೀ! ಮಹಡೀ ಕೋಣೆಯೊಳಗೆ ಅಳಿಯನ ಸಾಮಾನುಗಳನ್ನು ಇಡಲಿಕ್ಕೆ ಹೇಳು. ಅಲ್ಲಿರುವ ಹಾಸಿಗೆಗಳನ್ನೆಲ್ಲಾ ತೆಗೆದುಹಾಕಿದೆಯೋ? ಅಲ್ಲ ಬಿಡಿಸಿದ್ದು ಬಿಡಿಸಿದ ಹಾಗೆಯೇ ಉಂಟೊ?" ಎಂದು ಅಳಿಯನನ್ನು ನೋಡಿ—"ಹಲ್ಲುಜ್ಜಿಯಾಗಿದೆಯೆ? ಕಾಫಿ ತರಲಿಕ್ಕೆ ಹೇಳಲೊ?" ಎಂದರು.

"ಬೇಡ. ಸ್ಟೇಶನ್ನಿನಲ್ಲಿಯೇ ಕಾಫಿ ತಕ್ಕೊಂಡುಬಿಟ್ಟೆ. ಸ್ವಲ್ಪ ತಣ್ಣಗಿನ ನೀರು ಮಾತ್ರ ಸಾಕು" ಎಂದನು ಅಳಿಯ ದೊರೆ.

ಆಗ ಶೇಷಜ್ಜಿ ಅವನ ದೇಹಾರೋಗ್ಯವನ್ನು ಕುರಿತೂ ಮದರಾಸಿನ ಸೌಕರ್ಯಾಸೌಕರ್ಯಗಳನ್ನು ಕುರಿತೂ ವಿಚಾರಿಸಲಾರಂಭಿಸಿದಳು. ಇದೇ ಸಮಯವೆಂದುಕೊಂಡು ಶಾಸ್ತ್ರಿಗಳು ಮೆಲ್ಲನೆ ಜಾರಿಕೊಂಡರು.

ಕಲ್ಯಾಣಿ ದೊಡ್ಡವರಿದಿರಿನಲ್ಲಿ ತನ್ನ ಗಂಡನೊಡನೆ ಮಾತಾಡುವ ಅಭ್ಯಾಸವಿಲ್ಲದವಳಾದುದರಿಂದ, ಅವನು ಯಾವಾಗ ಒಳಗೋಣೆಗೋ ಮಹಡಿಗೋ ಬರುವನೆಂದು ಕುತೂಹಲದಿಂದ, ಎಡೆಗಟ್ಟಿನ ಮೆಟ್ಟಿಲ ಬಳಿಯಲ್ಲಿ ನಿಂತು ಬಾಗಿ ನೋಡುತ್ತಿದ್ದಳು. ಅಜ್ಜಿಗೂ ಗೋಪಾಲನಿಗೂ ತೊಡಗಿದ ಸಂಭಾಷಣೆ ಮುಗಿಯಲಿಕ್ಕೆ ಒಂದು ಗಂಟೆಯೇ ಆಯಿತು.

ಅನಂತರ ಅಳಿಯದೊರೆ ಮಹಡಿಯ ಕಡೆಗೆ ಹೊರಡಲು, "ಭಾವ, ಇದೆಂತಾ ವೇಷ? ದೊರೆ ವೇಷವಾ?" ಎಂದು ಕೇಳುತ್ತ ಅವನ ಕೂಡವೇ ಮಹಡಿಯನ್ನೇರಿದಳು ಶ್ಯಾಮಳೆ. ಯಾವ ಸಮಯವೆಂದು ಕಾಯುತ್ತಿದ್ದ ಕಲ್ಯಾಣಿ ಕೈಯಲ್ಲಿ ಕಾಫಿಯ ಕೂಜೆಯನ್ನು ಹಿಡಿದು ಕೊಂಡು, ಪದಾಲಂಕರಣಗಳ "ಘಲ್ಲು ಘಲ್ಲು" ನಿನಾದದೊಡನೆ ಮಹಡಿಗೆ ನಡೆತಂದಳು.

ಗೋಪಾಲನನ್ನು ನೋಡಿದೊಡನೆಯೇ ಏನು ಮಾತಾಡುವುದೆಂದು ತೋರದೆ, ದುಃಖವು ಎದೆಯನ್ನು ಬಿಗಿಯಲು, ಧಾರೆಧಾರೆಯಾಗಿ ಕಣ್ಣೀರು ಸುರಿಸಲಾರಂಭಿಸಿದಳು ಕಲ್ಯಾಣಿ.

"ಯಾಕೆ ಅಳುತ್ತಿ?" ಎಂದು ಅತಿ ಅನುತಾಪದಿಂದ ಕೇಳಿದನು ಗೋಪಾಲ. ಕಲ್ಯಾಣಿ ಬಾಯಿಬಿಡಲಿಲ್ಲ. ಏನು ಹೇಳುವುದು. ಹೇಗೆ ಆರಂಭಿಸುವುದು ಎಂದು ತಿಳಿಯದೆ ದಿಗ್ಭ್ರಮಿಸಿದಳು.

"ಏನಿದು ಕಲ್ಯಾಣಿ, ನನ್ನ ಮೇಲೆ ಕೋಪವೆ? ಮಾತಾಡುವುದಿಲ್ಲವೆ? ನೀನು ಬಂದಾಗಲೇ ಸ್ಟೇಶನ್ನಿಗೆ ಬಂದು ಎದುರುಗೊಂಡು ಮಾತಾಡಿಸ ಲಿಲ್ಲವಲ್ಲ ಎಂದು ಕೋಪವೆ? ಇಷ್ಟು ದಿವಸ ಎಲ್ಲಿಗೋ ಹೋಗಿ ನಿಧಾನವಾಗಿ ಬಂದೆನೆಂದು ಸಿಟ್ಟೆ?" ಎಂದು ಗೋಪಾಲನು ಕೊಂಚ ಮುಂಗಾಡಿಸುವ ದನಿಯಿಂದ ಕೇಳಿದನು.

ಅವನನ್ನು ಇದಿರೇ ಕಂಡು ಅವನ ಮುಂಗಾಡಿಕೆಯ ಮಾತನ್ನು ಕೇಳುತ್ತಲೇ ಕಲ್ಯಾಣಿ ಮೈಮರೆತುಹೋದಳು. ಈ ಸರಳೆಯನ್ನು ಸುಲಭ ದಲ್ಲಿ ಮೋಸಗೊಳಿಸಬಹುದೆಂಬುದನ್ನು ಕಂಡುಹಿಡಿದ ಗೋಪಾಲನು— "ನನ್ನ ಕಾಗದ ಸಿಕ್ಕಿದ್ದೀತಷ್ಟೆ? ನೀನು ನೋಡಿದಿಯೋ ಇಲ್ಲವೊ? ನನ್ನ ಸಮಾಚಾರ ನಿನಗೆ ಆ ಕಾಗದದಿಂದ ಗೊತ್ತಾಗಿದ್ದೀತಷ್ಟೆ? ಅಂತಹ ಸಮಯದಲ್ಲಿ ಪರೋಪಕಾರ ಮಾಡುವುದು ದೊಡ್ಡದೋ ಅಲ್ಲ 'ಹೆಂಡತಿಯ ಮನೇ ಹೆಮ್ಮನೇ' ಎಂದು ಮಿತ್ರನನ್ನು ಕೈಬಿಟ್ಟು ನಿನ್ನನ್ನು ನೋಡ ಬರುವುದು ದೊಡ್ಡದೊ? ನೀನೇ ಹೇಳು; ನನಗೋ ಯಾವಾಗ ಬಂದೇನು, ಯಾವಾಗ ನಿನ್ನನ್ನು ನೋಡಿಯೇನು ಎಂದು ಮನಸ್ಸು ತುಡಿತುಡಿಸಿಕೊಂಡಿದ್ದದ್ದು ಆ ದೇವರಿಗೆ ಗೊತ್ತು. ನೀನೇನೋ ಈಗ

ಹೊಸಾ ಹೆಣ್ಣಿನಹಾಗೆ ಮಾತಿಗೆ ಕೂಡ ಭಲೇ ಗಿರಾಕಿ ಮಾಡುತ್ತೀ" ಎಂದನು.

ಕಲ್ಯಾಣಿ ಬೆಳ್ಳಗಿದ್ದುದೆಲ್ಲಾ ಹಾಲೆಂದೇ ನಂಬುವವಳು. ಸ್ವಲ್ಪ ಸ್ವಲ್ಪವಾಗಿ ಅವನ ಮೋಹನ ಮಂತ್ರವು ತಲೆಗೇರಿತು. ಅವನ ಮೇಲೆ ಅದುವರೆಗೆ ತೋರಿಬಂದ ಸಂದೇಹಗಳೆಲ್ಲ ಹತ್ತಿಯಂತೆ ಹಾರಿಹೋದುವು. "ಆಹಾ ಇಷ್ಟು ಒಳ್ಳೆಯ ಗುಣವುಳ್ಳವರನ್ನು ಬಾಯಿಗೆ ಬಂದಹಾಗೆ ನಿಂದಿಸು ವರಲ್ಲ!" ಎಂದುಕೊಂಡು, "ಮಾತಾಡದೇನು? ನನ್ನ ಮಾತಿಗೆ ಅಂಥ ಗಿರಾಕಿಯೇನೂ ಇಲ್ಲಪ್ಪ. ಏನು ಮಾತಾಡುವುದು ಅಂತ ತೋರಲಿಲ್ಲ. ಸಂತೋಷದಿಂದ ಎದೆ ಬಿಗಿದುಕೊಂಡಹಾಗಾಯಿತು. ಹ್ಯಾಗಾದರೂ ನೀವು ಆರೋಗ್ಯವಂತರಾಗಿ ಬಂದರೆ ಸಾಕು ಅಂತ ತಪಿತವಿಸಿಕೊಂಡಿದ್ದೆ. ಯಾವು ದನ್ನು ಕುರಿತು ಕೇಳಲಿ ಅಂತ ನನಗೇ ಗೊತ್ತಾಗಲಿಲ್ಲ. ತಾಯಿ–ತಂದೆ, ಅಕ್ಕ–ತಂಗಿ, ಯಾರಾದರೂ ಒಬ್ಬರಿದ್ದಿದ್ದರೆ ಅವರ ಯೋಗಕ್ಷೇಮಗಳನ್ನು ಕೇಳುತ್ತಿದ್ದೆ. ಅದೇ ಒಬ್ಬರೂ ಇಲ್ಲಲ್ಲಾ. ನಿಮ್ಮ ಗೆಳೆಯರಿಗೆ ಪರೀಕ್ಷೆ ಪಾಸಾದೀತಾ ಎಂತ ಕೇಳಲೆ?" ಎಂದಳು.

ಅಷ್ಟರಲ್ಲಿ "ಸಾರ್, ಸಾರ್, ಓ ಮಿಸ್ಟರ್" ಎಂದು ನಾಗರಾಜನ ದನಿ ಕೇಳಿಸಿತು. ಕಲ್ಯಾಣಿ ಅವಸರವಸರವಾಗಿ ಕೆಳಗಿಳಿದುಬರುವಾಗ, ಇದಿರುಬರುವ ನಾಗರಾಜನ ಮೇಲೆಯೇ ತಾಗಿಕೊಂಡಳು.

"ಓಹೊ! ಮೈ ಕಣ್ಣು ಒಂದೂ ತಿಳಿಯೋದಿಲ್ಲಾಂತ ಕಾಣುತ್ತೆ!"
'ನೆತ್ತಿ ತಂಪಾಯ್ತಲೇ–ಸಖಿಯೇ–
ಮೈ ಕೈ ಸರಿಯಾಯ್ತಲೇ
ಮಾಡದ ಮನೆಯೂ ಎಲ್ಲಾ ಮೊದಲಂತೆ–
ಮನಸಿಗೆ ಹಿಡಿಯಿತೆಲೇ!'

ಎಂದು ಹಾಡಲಾರಂಭಿಸಿದನು. ಕಲ್ಯಾಣಿ ನಾಚಿಗೆಯಿಂದ ಮುಖವು ಕೆಂಪಡರಲು, "ಹೋಗಣ್ಣ! ನನ್ನ ಪರಿಹಾಸ ಮಾಡದಿದ್ದರೆ ನಿನಗೆ ನಿದ್ದೆ ಬರೋದಿಲ್ಲ" ಎಂದು ಹೇಳುತ್ತಾ ಮಹಡಿಯ ಮೆಟ್ಟಲಿನಿಂದ ಹಾರಿ ಓಡಿದಳು.

ಕೋಣೆಯಲ್ಲಿದ್ದ ಅಜ್ಜಿ—"ಚೆಂದಾಗಿದೆ ಹೆಣ್ಣು ಮಕ್ಕಳನ್ನು ಬೆಳೆಸುವ ಸೌರಣೆ! ಅಳಿಯ ಮೇಲಿದ್ದಾನೇಂತ ಕೊಂಚ ಕೂಡ ಭಯಾ–ಶಂಕೇ ಒಂದೂ ಇಲ್ಲದೆ, ಬೆನ್ನ ಸೆರಗು ಬಿಟ್ಟುಕೊಂಡು, ಮೊದ್ದೀಹಾಗೆ ಓಡ್ತಾಳಲ್ಲ! ಅತಿಶಯುವಮ್ಮ! ಕುದಿಯುವ ಗಂಜಿ ನಕ್ಕೀತು!" ಎಂದು ಜಪಮಣಿಯನ್ನು ಉರುಳಿಸುತ್ತಾ ಹೇಳಿದರು.

*         *         *

ಅಂದಿನಿರುಳು ಊಟದ ವೇಳೆಯಲ್ಲಿ ಗೋಪಾಲನು ಮೆಲ್ಲಗೆ, ವಿಲಾಯತಿಗೆ ಹೋಗುವ ಪ್ರಸ್ತಾಪವನ್ನೆತ್ತಿದನು. ಅದಕ್ಕೆ ಶಾಸ್ತ್ರಿಗಳು—"ನಮಗೆಲ್ಲಾ ಏನೂ ಇಷ್ಟವಿಲ್ಲ. ಇಲ್ಲಿಯೇ ಮೆಡಿಕಲ್ ಕಾಲೇಜೋ ಲಾ ಕಾಲೇಜೋ ಸೇರುವುದೊಳ್ಳೆಯದು. ಏನೋ ಇರುವ ಸೊತ್ತನ್ನಿಟ್ಟು ಕೊಂಡು, ಮೇಲೆ ಕೊಂಚ ಸಂಪಾದನೆಯಾದರೂ ಸಾಕು. ಸುಖವಾಗಿರ ಬಹುದು. ಸೀಮೆಗೆ ಹೋಗಿ ಬಂದುಬಿಟ್ಟರೆ ಮಾತ್ರ ಅದೆಂತಹ ಮಹಾಪದವಿ ಬಂದುಬಿಟ್ಟೀತು? ಸಾಮರ್ಥ್ಯವಿದ್ದರೆ ಅದೇ ಬಗೆಯ ವರಮಾನವನ್ನು ಬೇರೆ ಬಗೆಯ ಉದ್ಯೋಗದಲ್ಲಿಯೂ ಸಂಪಾದಿಸಬಹುದಲ್ಲಾ? ಇರುವುದರಲ್ಲೇ ಕ್ರಮವಾಗಿದ್ದರೆ ಎಲ್ಲಿಯೂ ಮುಂದಕ್ಕೆ ಬರಬಹುದು. ದೂರದೇಶ, ಕಾಲೋ ತಲೆಯೋ ನೊಂದರೆ ನೆರೆಯಾ ನೆಂಟಾ? ಎಲ್ಲಾ ಯೋಚನೆ ಮಾಡಿನೋಡಿದರೆ ವಿಲಾಯತಿಗೆ ಹೋಗುವುದೇನೂ ಅಷ್ಟು ಉಚಿತವಾಗಿ ತೋರುವುದಿಲ್ಲ. 'ನನ್ನ ಹತ್ತರ ಹಣವುಂಟು. ನಾನು ಹೋಗಿಯೇ ತೀರುವೆ. ನಿಮಗೇನಯ್ಯ' ಎಂದು ಹೇಳಿದರೆ, ಅದಕ್ಕೆ ಮೇಲೆ ಮಾತಾಡಲು ನಾನು ತಯಾರಾಗಿಲ್ಲ. ನನಗೆ ತೋರಿದ್ದು ಹೇಳಿದೆ. ಇನ್ನು ಅವರವರ ಇಷ್ಟ" ಎಂದರು.

ಶೇಷಜ್ಜಿಯೆಂದರು—"ಏನೋ ಜಿಲ್ಲಾ ಕಲೆಕ್ಟರೂ ಅಂದರೆ ದೊಡ್ಡವರಲ್ಲವೆ? ಆದರೂ ಹೊಲೆಯನೊಟ್ಟಿಗೆ ಹೊಲೆಯನಾಗಿ ಮೂರು ವರ್ಷ ಇರಬೇಕಂತಲ್ಲಾ? ನಡುವೆ ಬರುವ ತಿಥಿ, ಶ್ರಾದ್ಧ, ಒಳ್ಳೆಯದು–ಕೆಟ್ಟದು ಎಲ್ಲಾ ಗೋವಿಂದಾರ್ಪಣ. ಸಾವಿರ ಸಾವಿರ ಸಂಪಾದಿಸಿದರೂ ಸೀಮೆಗೆ ಹೋದರೆ ಕೇವಲವೇ ಸರಿ."

"ನಿಮ್ಮೂರ ಲಕ್ಷ್ಮಣ ಘನಪಾಠಿಗಳ ಮೊಮ್ಮಗ ವಿಲಾಯ್ತಿಗೆ ಹೋಗಿಬಂದನಲ್ಲಾ ?- ಅವನನ್ನು ಯಾರು ಭ್ರಷ್ಟಮಾಡಿದರು ? ನಿಮ್ಮನೆಯ ನಿಮಂತ್ರಣಕ್ಕೆ ಕೂಡ ಅವನ ತಂದೆಯನ್ನು ಕರೆಯುವುದಿಲ್ಲವೆ? ಅವನು ಹೋಗಬಹುದು, ನಾನು ಮಾತ್ರ ಹೋಗಬಾರದೊ?" ಎಂದು ಗೋಪಾಲನು ಕೇಳಿದ.

"ಅವನು ಹೋಗುವಾಗ ಜೊಂಬಾಯಿ ಮೂಲಕ ಹೋದ. ಬರುವಾಗ ಸಿಲೋನ ದಾರಿಯಾಗಿ ಬಂದು, ಪ್ರಾಯಶ್ಚಿತ್ತ ಪುನರುಪನಯನಾದಿಗಳನ್ನು ಮಾಡಿಕೊಂಡು ಬಿಟ್ಟುಹೋದ ಶ್ರಾವಣ-ಶ್ರಾದ್ಧ-ತರ್ಪಣ ಎಲ್ಲವನ್ನೂ ಮಾಡಿಸಿ, ಜುಟ್ಟು ಕೂಡ ಇಡಿಸಿಯೇ ಊರಿಗೆ ಕರಕೊಂಡು ಬಂದರಂತೆ ಅವನನ್ನು" ಎಂದರು ಶೇಷಜ್ಜಿ.

"ಅದರಂತೆ ನಾವೂ ಮಾಡಿದರಾಯಿತಷ್ಟೆ?" ಎಂದು ಗೋಪಾಲನೆಂದ.

"ಕುಂಭಕೋಣದಲ್ಲೊಬ್ಬ ವಿಲಾಯತಿಗೆ ಹೋದ. ಅವರ ಮನೆಯ ಶ್ರಾದ್ಧಕ್ಕೆ ಒಬ್ಬರೂ ಬರಲಿಲ್ಲ. ಬೆಳ್ಳಿ ತಂಬಿಗೆಯನ್ನೂ, ಒಂದು ಸಾವರಿನ್ ದಕ್ಷಿಣೆಯನ್ನೂ ಕೊಡುವುದಾಗಿ ವಾರ್ತೆ ಹುಟ್ಟಿಸಿದ; ಬಂದುಬಿಟ್ಟರೆಲ್ಲರೂ. 'ರಜತಪಾತ್ರ, ರಜತಪಾತ್ರ' ಎಂದು ಅವರೆಲ್ಲಾ ಊಟ ಮುಗಿಯುವ ವರೆಗೂ ನೋಡಿ ನೋಡಿ ಆನಂದಪಟ್ಟು ಕಣ್ಣುಬಿಟ್ಟದ್ದೇ ಬಂತು. ಹೋಗುವಾಗ ಸೇವಕನಿಂದ ಎಲ್ಲವನ್ನೂ ಕಿತ್ತಿಸಿಬಿಟ್ಟನಂತೆ" ಎಂದು ನಾಗರಾಜನಂದ.

"ನಾಗು, ಸಾಕೋ ನಿನ್ನ ಪ್ರಸಂಗ. ಬರುತ್ತ ಬರುತ್ತ ನಿನ್ನ ಬುದ್ಧಿ ಭಾರೀ ವಿಸ್ತಾರವಾಗುವಹಾಗಿದೆ! ಹಿರಿಯರನ್ನೂ ಶಾಸ್ತ್ರವನ್ನೂ ನಿಂದಿಸಬಾರದು. ಯಾರೋ ನೂರಕ್ಕೊಬ್ಬ ದುಷ್ಟನಿದ್ದರೆ ಅದೊಂದು ಉದಾಹರಣೆಯೊ?" ಎಂದರು ಶೇಷಜ್ಜಿ.

"ಉದಾಹರಣೆ ಹೇಳಿಲ್ಲ ನಾನು. ಈ ಕಾಲದಲ್ಲಿ ವಿಲಾಯತಿಗೆ ಹೋಗುವುದು ಸರ್ವಸಹಜ. ನೀವು ಸುಮ್ಮನೆ ಹೆದರುವುದೇ ಬೇಡ. ಸೀಮೆಗೆ ಹೋಗಿ ಬಂದವನನ್ನು ಯಾರೂ ಬಹಿಷ್ಕರಿಸುವುದಿಲ್ಲ. ಅದೆಲ್ಲಾ ಬೆಟ್ಟವೇರಿಹೋಗಿ ಬಹು ಕಾಲವಾಯಿತು" ಎಂದನು ನಾಗು.

ಶಾಸ್ತ್ರಿಗಳು ಮತ್ತೇನೂ ಹೇಳಲಿಲ್ಲ. ನಾಗು ಗೋಪಾಲನಿಂದ ಏನೋ ಗುಟ್ಟು ತಿಳಿಯಲಿಕ್ಕಾಗಿ ಅವನಿಗೆ ಅನುಕೂಲವಾಗುವಂತೆ ಮಾತಾಡುವ ನೆಂದು ಸುಮ್ಮನಿದ್ದರು.

* * *

ಸಣ್ಣ ಹೆಣ್ಣುಗಳಿಗೆ ಯಾರೊಡನೆ ಏನು ಮಾತಾಡಬೇಕು, ಯಾವುದು ಮಾತಾಡಬಾರದು ಎಂದು ತಿಳಿಯುವುದಿಲ್ಲ. ಮೊದಲು ಪ್ರೇಮಾಧಿಕ್ಯದಿಂದ ಯಾವುದು ಅವಶ್ಯ, ಯಾವುದು ಅನವಶ್ಯವಲ್ಲ ಎಂಬುದನ್ನು ಕೂಡ ಯೋಚನೆ ಮಾಡದೆ ಗಂಡನ ಮುಂದೆ ತೌರುಮನೆಯನ್ನು ಕುರಿತು ತಿಳಿಸ ಬಾರದಂತಹ ಕುಟುಂಬ ವಿಷಯಗಳನ್ನೆಲ್ಲ ಹೇಳಿ, ಅನಂತರ ಅದರಿಂದ ದೊಡ್ಡ ರಗಳೆ-ಜಗಳಗಳು ಉಂಟಾದಾಗ, ಯಾಕೆ ಹೇಳಿದೆನೋ ಎಂದು ದುಃಖಿಸುವುದುಂಟು. ಕಲ್ಯಾಣಿ ಅಂತಹ ಹುಡುಗಿಯೆ. ಅಂದಿನ ಇರುಳೇ ಅವಳು ಗೋಪಾಲನನ್ನು ಕುರಿತು ತನ್ನ ತಂದೆಯಿಂದ ಕೇಳಿದ್ದನ್ನೆಲ್ಲಾ ಒಂದೂ ಬಿಡದೆ ಗಂಡನಿಗೊಪ್ಪಿಸಿಬಿಟ್ಟಳು.

ಗೋಪಾಲನೋ, ಒಂದು ವಿಧದಲ್ಲಿ ದಿಗಿಲುಗೊಂಡನಾದರೂ, ಈ ಕಪಟವರಿಯದ ಎಳೆಯ ಹುಡುಗಿಯನ್ನು ಸುಲಭದಲ್ಲೆ ವಂಚಿಸಿ ತನ್ನ ಕಾರ್ಯವನ್ನು ಸಾಧಿಸಿಬಿಡಬಹುದೆಂದು ತೀರ್ಮಾನಿಸಿಕೊಂಡು—"ಏನು ಕಲ್ಯಾಣಿ! ಅವರೆಲ್ಲ ಮುಟ್ಠಾಳತನದಿಂದ ಬೊಗಳಿದರೆ ನೀನೂ ನಂಬಿ ಬಿಡುವುದೆ? ಗ್ರಹಚಾರವೆ! ನಾನು ನಿನ್ನಲ್ಲಿಟ್ಟಿರುವ ಪ್ರೇಮದ ಆಳತೆ ನೀನೇನು ಬಲ್ಲೆ? ನಿನ್ನನ್ನು ಯಾವಾಗ ನೋಡುವೆನೋ ಎಂದು ತವತವಿಸಿ ಕೊಂಡಿದ್ದದ್ದು ನನಗಲ್ಲವೆ ಗೊತ್ತು? ನೀವೆಲ್ಲಾ ಊರೊಳಗಿರುವ ಹೀನ ಪಿಸುಣರ ಮಾತನ್ನೆಲ್ಲ ನಂಬಿದ್ದಲ್ಲದೆ ನನ್ನನ್ನೂ ಸಂದೇಹಿಸುತ್ತೀರಿ. ಬೇಕಾದರೆ ನಾಳೆಯೇ ನನ್ನ ಗೆಳೆಯ ಪಾರ್ಥಸಾರಥಿ, ಕುಲಶೇಖರನ್ ಎಲ್ಲರನ್ನೂ ಕರೆದುತರುತ್ತೇನೆ. ನೀವೇ ನೇರವಾಗಿ ಎಲ್ಲವನ್ನೂ ವಿಚಾರಿಸಿ ಕೊಳ್ಳಿರಿ. ನನ್ನನ್ನು ಕುರಿತು ಇಷ್ಟು ಉಚ್ಚವಾದ ಅಭಿಪ್ರಾಯವನ್ನು ಇಟ್ಟುಕೊಂಡಿರುವ ನಿಮ್ಮ ಮನೆಯ ಮೆಟ್ಟಲು ಏರಿದ್ದೇ ತಪ್ಪಾಯಿತು. ಅದರಲ್ಲಿಯೂ ಊಟ ಮಾಡುತ್ತಿರುವಾಗ ನಿನ್ನ ತಂದೆ ನನ್ನನ್ನು ಅವಮಾನ ಪಡಿಸಿದ ಮೇಲೆ ಇಲ್ಲಿ ನಾನು ಇರಲೇಬಾರದು. ವಿಲಾಯಿತ್ತಿ ವಿದ್ಯೆಗೆ

ಹಣ ಕೊಡುವುದಾಗಿ ಹೆಚ್ಚಳ ಹೇಳಿಕೊಂಡರಲ್ಲ? ಅಭಿಪ್ರಾಯ ಹೇಗಿದೆ ನೋಡೋಣವೆಂದೇ ನಾನು ಆರಂಭಿಸಿದ್ದು. ಅದಕ್ಕವರು ಮೊತ್ತಮೊದಲೇ ಅಡ್ಡಗಲ್ಲು ಹಾಕಿಬಿಟ್ಟರಲ್ಲ. ಈ ಸಾವಿರ ಎರಡು ಸಾವಿರ ಯಾರನ್ನು ಕೇಳಿದರೂ ಸಿಕ್ಕೀತು. ನಾನು ಬಾಯಿ ಅಲುಗಿಸಿದರೆ ಸಾಕು; ಕೊಡಲಿಕ್ಕೆ ಎಷ್ಟೋ ಮಂದಿ ಕಾದಿದ್ದಾರೆ. ಈಗ ಇವರು ಇಷ್ಟು ಮಾತಾಡುತ್ತಾರಲ್ಲಾ, ಇವರ ದಯವಿಲ್ಲದೆಯೇ ನಾನು ವಿಲಾಯ್ತಿಗೆ ಹೋಗಿಬಂದು ಕಲೆಕ್ಟರ್ ಕೆಲಸದಲ್ಲಿದ್ದರೆ, 'ನನ್ನ ಅಳಿಯ ಐ.ಸಿ.ಎಸ್.' ಎಂದು ಹೆಮ್ಮೆ ಹೇಳಿ ಕೊಳ್ಳುವುದಿಲ್ಲವೋ? ಈ ಕತೆಯನ್ನೆಲ್ಲಾ ಯಾರೂ ಹೇಳಿಗೀಳಿ ಕೊಟ್ಟದ್ದಲ್ಲ. ಹಣ ಕೊಡದೇ ಇರಲಿಕ್ಕೆ ಒಂದು ನೆಪ. ನೀನೂ ನಿನ್ನ ತಾಯಿಯೂ ಹಣ ಕೊಡಬೇಕೆಂದು ಒತ್ತಾಯಿಸುತ್ತೀರಿ. ಅದಕ್ಕಾಗಿ ಈ ಕತೆಯನ್ನು ತಾವೇ ಕಲ್ಪಿಸಿಕೊಂಡು 'ಈಶ್ವರಯ್ಯರು, ವಿಷ್ಣು ಅಯ್ಯರು' ಎಂದು ಬುರುಡೇ ಬಿಡುತ್ತಾರೆ. ಪನಂಗುಡಿಯವರೋ ಮಹಾ ಪಿಸುಣರು. ಚೂರೀ ಗಾಯಕ್ಕೆ ಸುಣ್ಣ ಕೊಡದ ಮಹಾಪ್ರಭುಗಳು" ಎಂದನು.

ಕಲ್ಯಾಣಿಗೆ ಒಂದೂ ತೋರಲಿಲ್ಲ. ಹೆತ್ತವರು ಹೇಳುವುದು ಕೇಳಿದರೆ ಅದೇ ನಿಜವೆನಿಸುತ್ತದೆ; ಇವರು ಹೇಳುವುದು ಕೇಳಿದರೆ ಇದೂ ನಿಜವೆನಿಸುತ್ತದೆ. ಯಾವುದು ನಂಬುವುದೆಂದು ತೋರದೆ ದಿಗ್ಭ್ರಮಿಸಿದಳು.

ಆಗ ಗೋಪಾಲನು, ಇದುವೇ ಅವಳನ್ನು ಇನ್ನಷ್ಟು ಮೋಸಗೊಳಿಸಲು ತಕ್ಕ ಸಮಯವೆಂದುಕೊಂಡು, ಬಾಗಿದ್ದ ಅವಳ ಮುಖವನ್ನು ಮೆಲ್ಲನೆ ಎತ್ತಿ, ಮುಂದಲೆಯಿಂದ ಹಣೆಯ ಮೇಲೆ ಉರುಳಿಕೊಂಡಿದ್ದ ಅವಳ ಮುಂಗುರುಳನ್ನು ತೀಡುತ್ತ—"ಕಲ್ಯಾಣಿ! ನೀನೇಕೆ ಸುಮ್ಮನೇ ಮನನೊಂದುಕೊಳ್ಳುತ್ತಿ? ಇಷ್ಟು ವಿಷಯ ಗೊತ್ತಾದ ಮೇಲೆ ಒಂದು ಕ್ಷಣ ಕೂಡ ಇಲ್ಲಿರಲು ನನಗಿಷ್ಟವಿಲ್ಲ. ಆದರೂ ಎಲ್ಲವನ್ನೂ ಸಹಿಸಿಕೊಂಡು, ನಾನು ಹೋಗಿಬಿಟ್ಟರೆ ನಿನ್ನ ಮನಸ್ಸು ತುಂಬಾ ನೋಯುವುದೆಂದು ಅಂಜಿ, ಇಲ್ಲಿಯೇ ಇರುವುದೆಂದು ತೀರ್ಮಾನಿಸಿಬಿಟ್ಟದ್ದೇನೆ. ಹಾಗಿರುವಾಗ ನೀನಾಗಿ ಏಕೆ ನಿನ್ನ ಮನಸ್ಸು ಹುಣ್ಣುಮಾಡಿಕೊಳ್ಳುತ್ತಿ?" ಎಂದು ಅತ್ಯಂತ ಪ್ರೀತಿದೋರಿ ಕೇಳಿದನು. ಕಲ್ಯಾಣಿಯ ಗಲ್ಲಗಳಲ್ಲಿ ಕಿರುಗುಳಿಗಳೆದ್ದುವು; ಅಕಳಂಕ ಮುಖದಲ್ಲಿ ಎಳೆನಗೆ ಸುಳಿಯಿತು.

# ಸುರಳಿಯಾಂಡಿ

ಹಗಲು ಮೂರು ಗಂಟೆ ಇದ್ದೀತು. ಒರಗುಕುರ್ಚಿಯಲ್ಲಿ ಮಲಗಿದ ಪತಂಜಲಿ ಶಾಸ್ತ್ರಿಗಳು ಕಣ್ಣುಬಿಡಿಸಿ, ಮೈಮುರಿದುಕೊಂಡು "ಎಲೀ ಲಕ್ಷ್ಮೀ! ಏನುಮಾಡುತ್ತಿದ್ದೀಯೇ? ಕಾಫಿ ಆಯಿತೋ?" ಎಂದರು.

ಲಕ್ಷ್ಮಮ್ಮ ಒಂದು ತಂಬಿಗೆಯಲ್ಲಿ ತಣ್ಣೀರನ್ನೂ, ಕೂಜೆಯಲ್ಲಿ ಕಾಫಿಯನ್ನೂ ತೆಗೆದುಕೊಂಡು ಬಂದಳು. ಶಾಸ್ತ್ರಿಗಳು ಅಂಗಳದಲ್ಲಿಯೇ ಬಾಯಿ ಮುಕ್ಕಳಿಸಿಬಿಟ್ಟು, ಒರಗುಕುರ್ಚಿಯಲ್ಲಿ ಕುಳಿತು, ಕಾಫಿಯನ್ನಿಷ್ಟು ರುಚಿ ನೋಡಿ — "ಶ್ಯ! ಡಿಕಾಷನ್ ಕಮ್ಮಿ" ಎಂದು ವಿಮರ್ಶೆ ಹೇಳಲು, "ಇನ್ನೂ ಕೊಂಚ ತರಲೆ?" ಎಂದಳು ಲಕ್ಷ್ಮಮ್ಮ.

ಮಲೆಯಾಳಿಗಳು ಹೇಳುವಂತೆ 'ಒಣ್ಣಾಂತರಮಾಯ್' ಅಂದಿನ ಕಾಫಿ ಇತ್ತು. ಏನಾದರೂ ತಪ್ಪು ಹೇಳದಿದ್ದರೆ ಲಕ್ಷ್ಮಮ್ಮ ತನ್ನ ಕೆಲಸಗಳನ್ನು ಜಾಗರೂಕತೆಯಿಂದ ಮಾಡುವುದಿಲ್ಲವೆಂಬುದು ಶಾಸ್ತ್ರಿಗಳ ಅಭಿಪ್ರಾಯ.

"ಏನು ಮಾಡಿದರೂ ಎಷ್ಟೇ ಒಳ್ಳೇದಿದ್ದರೂ ಇವರು ಒಂದು ತಪ್ಪು ಹೇಳೇ ಹೇಳುತ್ತಾರೆ. ಇವರ ಮಾತಿಗೆ ಬೆಲೆಯೇ ಇಲ್ಲ" ಎಂದು ಲಕ್ಷ್ಮಮ್ಮ ತನಗೆ ತಾನೇ ಹೇಳಿಕೊಂಡಳು.

"ಅಳಿಯ ಯಾವುದಕ್ಕೆ ಅಪ್ಲಿಕೇಶನ್ ಹಾಕಿದ್ದಾನಂತೆ? ಕೇಳಿ ದಿಯಾ?" ಎಂದರು ಶಾಸ್ತ್ರಿಗಳು.

"ಅದೇನು? ನೀವೇ ಕೇಳಬಾರದೊ? ಅವನು ಮಾತಾಡದಿದ್ದರೆ ಹೋಗಲಿ, ನಾಗೂನಾದರೂ ಕೇಳಲಿಕ್ಕೆ ಹೇಳಬಾರದೊ? ಅವಳೊಬ್ಬಳು ಮಾರಾಣಿ. ನಾವು ಕೇಳಿದರೂ ಒಂದೂ ಸರಿಯಾಗಿ ಹೇಳೋದಿಲ್ಲಾಂತಾಳೆ" ಎಂದು ಹೇಳುತ್ತಿದ್ದಾಗ, ಹಳೆಯ ಸಾಲಿಗನಾದ ಸುರಳಿಯಾಂಡಿವೇಲನು ವೀಳ್ಯ ಜಗಿಯುತ್ತಾ ಅಲ್ಲಿಗೆ ಬಂದನು.

"ಸಾಮಿ ದಂಡ! ನೀವು ಇಲ್ಲಿಗೆ ಬಂದ ಸಂಗ್ತಿ ಗೊತ್ತಿಲ್ಲದೇ ಪನಂಗುಡಿಗೆ ಹೋಗಿ ಸುತ್ತೀ ಸುತ್ತೀ, ಅಲ್ಲಿ ಕೆಲಸ ನೋಡುವ ಅಯ್ಯಾ ಹತ್ರ ವಿಳಾಸಾ ತಿಳಕೊಂಡು ಇಲ್ಲಿ ಬಂದೆ" ಎಂದು ವೈಬಾಗಿದನು.

"ಸರಿ. ಯಾವಾಗ ಬಂದಿ? ಕಾಪೀನೀರು ಕುಡಿದಿಯಾ? ಅನ್ನ ತಿಂದಿಯಾ?" ಎಂದರು ಶಾಸ್ತ್ರಿಗಳು.

"ನಿನ್ನೆ ಬೆಳಿಗ್ಗೆ ರೈಲೇರಿದ್ದೆ. ಇನ್ನೂ ಹಲ್ಲಿಗೆ ಹಸಿನೀರೂ ಹಾಕಿಲ್ಲ. ಬೆಳಿಗ್ಗೆಯೇ ಬಂಡಿ ಬಂದಿತ್ತು. ಇಲ್ಲೀ ದಿಕ್ಕು ದಿಸೇ ತಿಳೀದೇ ಸುತ್ತೀ ಸುತ್ತೀ ಬಂದೆ ಸಾಮಿ."

"ಇಕೋ, ಮೊದಲು ಇವನಿಗೆ ಸ್ವಲ್ಪ ತಂಗೂಳಿದ್ದರೆ ಹಾಕು. ಇಲ್ಲದಿದ್ದರೆ ಕಾಪಿಯಾದರೂ ಕೊಡು" ಎಂದರು ಶಾಸ್ತ್ರಿಗಳು.

"ಅನ್ನ ಬೇಡ ಸಾಮಿ. ಕಾಪೀನೀರೇ ಸಾಕು. ನಾನು ಬರಕೊಟ್ಟಿರೋ ನೋಟಿಗೆ ಕಾಲಾವಧಿಯಾಗುತ್ತೇ ಅಂತ ಕಾಣುತ್ತೆ. ಅದೇ ಈ ಬಾರಿ ಹಣವನ್ನೂ ಕೊಟ್ಟುಬಿಟ್ಟು, ತಮ್ಮನ್ನೂ ನೋಡಿಕೊಂಡು ಹೋಗೋಣಾಂತ ಬಂದೆ ಸಾಮಿ. ತಮ್ಮ ಮಾಯಾಂಡಿ 'ಇಜಿಷ್ಟರೀ' ಮಾಡೋಣಾಂತ ಅಂದ. ಅದೇನು ಕರ್ಮವೋ ನಮಗೆ ಅಭ್ಯಾಸಿಲ್ಲ. ನೀವೇ ನೋಡಿ ಅಡವು ಕೂಡಾ ಇಲ್ಲದೇ ನಂಬಿ ಕೊಡಲಿಲ್ಲವೊ? ಖುದ್ದಾಗಿ ಬಂದು ಒಪ್ಪಿಸದೇಹೋದರೆ, ಆ ಕಪ್ಪಣ್ಣಸಿಗೆ ಬಗೆಹೇಳಬೇಕಲ್ಲಾ. ತಮ್ಮ ಕೈಲೇಕೊಟ್ಟು, ನೋಟನ್ನು ಹರಿದು ಬಿಸಾಡದೇ ಹೋದರೆ ನಿದ್ದೆಬಾರದು ಸಾಮಿ" ಎಂದು ಹೇಳುತ್ತಾ ಗಂಟನ್ನು ಬಿಚ್ಚತೊಡಗಿದನು.

ಯಾವಾಗಲೂ ಕಬ್ಬಿಣದ ಪೆಟ್ಟಿಗೆಯು ಹಾಗು ಇತರ ಬೀಗದ ಕೈಗಳೆಲ್ಲಾ ಕಲ್ಯಾಣಿಯ ಹತ್ತಿರವೇ ಇರುವುದು ಬಳಕೆ. ಮನೆಗೆ ಬೇಕಾದ ಸಾಮಾನುಗಳನ್ನು ತರಿಸುವುದೋ ವ್ಯಯಿಸುವುದೋ ಎಲ್ಲಾ ಕಲ್ಯಾಣಿಯೇ. ಆದ್ದರಿಂದ ಶಾಸ್ತ್ರಿಗಳು, "ಕಲ್ಯಾಣೀ! ಕಬ್ಬಿಣದ ಪೆಟ್ಟಿಗೆಯೊಳಗೆ ಬದಿಯ ಸಣ್ಣರೆಯಲ್ಲಿ ಒಂದು ಉದ್ದನ್ನ ಕವರಿದೆ ನೋಡು. ಅದನ್ನಿತ್ತ ತಾ" ಎಂದರು. ಕಲ್ಯಾಣಿ ಮಹಡಿಯ ಮೇಲಿಂದಿಳಿದುಬಂದು, ಆ ನೋಟು ಕವರನ್ನು ತಂದುಕೊಟ್ಟಳು.

ಸುರಳಿಯಾಂಡಿ ತಂದಿದ್ದ ಹಣವನ್ನು ಎಣಿಸಿ ನೋಡಿಕೊಂಡು ಮತ್ತೆ ಕಟ್ಟಾಗಿ ಕಟ್ಟಿ, "ಅಮ್ಮಾ, ಭದ್ರವಾಗಿ ಕೆಳಗಿನ ಡ್ರಾಯರಿನೊಳಗಿಟ್ಟು ಬಿಡು. ಇವತ್ತು ಶನಿವಾರ. ಸೋಮವಾರ ಬ್ಯಾಂಕಿನಲ್ಲಿ ಕಟ್ಟಿದರಾಯಿತು" ಎಂದಂದು ಶಾಸ್ತ್ರಿಗಳು ಪ್ರೋಮಿಸರಿ ನೋಟನ್ನು ಅವನ ಕೈಗೆ ಕೊಟ್ಟರು.

ಕಲ್ಯಾಣಿ ಹಣವನ್ನು ಬೀಗಭದ್ರ ಮಾಡಿ, ಬೀಗದಕ್ಕೈ ಗೊಂಚಲನ್ನು ಉಡಿಯಲ್ಲಿ ಸಿಕ್ಕಿಸಿಕೊಂಡು, ಅಡುಗೆಮನೆಯ ಕಡೆಗೆ ನಡೆದಳು.

* * *

ಇರುಳು ಸುಮಾರು ಎಂಟು ಗಂಟೆ. ಕಲ್ಯಾಣಿ ಎಂದಿಲ್ಲದ ತುಂಬು ಸಂತಸವುಳ್ಳವಳಾಗಿ ತೋರುತ್ತಿದ್ದಳು. ರಂಗನಾಥನೂ ಸುಂದರಿಯೂ ಬಹಳ ಆನಂದದಿಂದ 'ಕ್ರಿಕೆಟ್' ಆಟವನ್ನು ಕುರಿತು ತರ್ಕಮಾಡು ತ್ತಿದ್ದರು. ಶೇಷಜ್ಜಿ, ಆಗತಾನೇ ತನ್ನ ಫಲಾಹಾರವನ್ನು ಮುಗಿಸಿಕೊಂಡು, "ಶಂಭೊ! ಮಹಾದೇವ! ಕೈಲಾಸಪತೆ!" ಎಂದು ಉಚ್ಚರಿಸುತ್ತ ಹಲಗೆ ಮಂಚದಲ್ಲಿ ಕುಳಿತಿದ್ದರು. ಸುಂದರಿಗೆ ನಿಶ್ಚಯಿಸಲ್ಪಟ್ಟ ವರನನ್ನು ಕುರಿತೂ, ಆವನ ಕುಟುಂಬ ವ್ಯವಹಾರಗಳನ್ನು ಕುರಿತೂ ಲಕ್ಷ್ಮಮ್ಮ ವಿವರ ತೆಗೆದು ಕೊಂಡಿದ್ದಳು. ಹೊರಗೆಹೋಗಿದ್ದ ಶಾಸ್ತ್ರಿಗಳು ಹಿಂದಿರುಗಲು ಹೊತ್ತಾದೀ ತೆಂದು ಅರಿತು ಲಕ್ಷ್ಮಮ್ಮ, ನಾಗರಾಜನಿಗೂ ಗೋಪಾಲನಿಗೂ ಊಟ ಮಾಡುವಂತೆಯೂ, ಕಲ್ಯಾಣಿಗೆ ಬಡಿಸುವಂತೆಯೂ ಹೇಳಿ, ತಾನು ಅತ್ತೆಯವರೊಡನೆ ಮಾತಾಡುತ್ತ ನಡುಮನೆಯಲ್ಲಿ ಕುಳಿತಿದ್ದಳು.

ಊಟಮಾಡುತ್ತ ಗೋಪಾಲನೆಂದ—"ಇಷ್ಟು ದಿವಸ ಮದುವೆಯ ಮಾತೇ ಕೇಳಿಸಲಿಲ್ಲ. ವೈಶಾಖದ ಅಂತ್ಯದಲ್ಲಿ ಜಾತಕ ನೋಡುತ್ತಾರಲ್ಲ?"

"ಬರತಕ್ಕ ಹಣ ಬಂದಮೇಲೆ ನೋಡೋಣಾ ಅಂತ ಇದ್ದರು. ಸುರಳಿಯಾಂಡಿ ಎರಡು ಸಾವಿರವನ್ನೂ ತಂದುಕೊಟ್ಟ. ಕುಟ್ಟೈಯ ಶೆಟ್ಟಿಯೂ, ಅಹಮ್ಮತ್ತುಂಬಿ ರಾವುತ್ತನೂ ನಾಳೆ ಬರುವುದಾಗಿ ವರ್ತಮಾನ ಬಂದದೆ. ಆದ್ದರಿಂದ ಈ ವರುಷವೇ ಸುಂದರಿಗೆ ಮದುವೆ ಮಾಡಿಬಿಟ್ಟರೆ, ಬರುವ ವರ್ಷ ಸೊಸೆಯನ್ನು ತರುವುದಕ್ಕೆ ಸರಿಯಾಗುತ್ತದೆ" ಎಂದಂದು ಕಲ್ಯಾಣಿ ನಾಗುವನ್ನು ನೋಡಿ ನಕ್ಕಳು.

"ಅದೇನು? ಮನೇಹುಡುಗಿ ಹೋದರೆ ಸೊಸೇ ಬರಬೇಕಂತ ಶಾಸ್ತ್ರವುಂಟೋ? ಅದೆಂತಹ ಶಾಸ್ತ್ರನೋ!" ಎಂದ ನಾಗು.

"ಈಗಲೇ ಬರಬಾರದಂತೇನೂ ಇಲ್ಲ. ಖರ್ಚಿನ ಮೇಲೆ ಖರ್ಚು ತಾನೇ? ನಿನ್ನ ಹೆಂಡತಿಗೆ ವಜ್ರ ಕೆತ್ತಿದ ಬಳೇ ಬೇಕೂ ಅನ್ನುತ್ತೀ.

ಬೆಂಡೋಲೆ ಒಡ್ಯಾಣ ಎಲ್ಲಾ ಹಾಕುವುದಾದರೆ ನಾಲ್ಕೈದು ಸಾವಿರ ಆಗಿಬಿಡುವುದಿಲ್ಲವೋ?"

"ಆದರೆ ಸೊಸೆ ಬೆಂಡೋಲೆ ಒಡ್ಯಾಣ ಒಂದೂ ಇಲ್ಲದೆ ಬರೀ ಬೋಳಾಗಿಯೇ ಬರುತ್ತಾಳೋ?"

ಕಲ್ಯಾಣಿ ಏನೂ ಹೇಳದಿರಲು ನಾಗು—"ಏನು ಕಲ್ಯಾಣಿ! ಉತ್ತರವೇ ಇಲ್ಲ. ಹೋದರೆ ಹೋಗಲಿ. ಅಳಿಯಂದಿರ ಎಲೆ ನೋಡಿ ಬಡಿಸಮ್ಮ. ಇವತ್ತೇನು? ತುಂಬ ಖುಷಿಯಾಗಿರುವ ಹಾಗೆ ಕಾಣುತ್ತೀ? ಏನುಸಂಗತಿ? ಸ್ವಲ್ಪ ಹೇಳಬಾರದೆ? ನಾನೂ ಕೊಂಚ ಅದರಲ್ಲಿ ಭಾಗಿಯಾಗುತ್ತೇನಲ್ಲ."

"ಹೊಸತಾಗಿ ಎಂತ ಖುಷಿ ಬಂದೀತು? ಒಂದೂ ಇಲ್ಲ."

"ಅದೇನೋ ನನಗೆ ಗೊತ್ತಿಲ್ಲ. ಏನೋ ಹಾಡೆಲ್ಲಾ ಗುಣಗುಟ್ಟುತ್ತಿ. ಹೊಸಾ ಸಿಲ್ಕು, ಹೊಸ ಫ್ಯಾಶನ್ನಿನ ಜಡೆ. ಎಲ್ಲಾ ನೋಡಿದರೆ ಏನೋ ವಿಶೇಷವಿರುವ ಹಾಗೆಯೇ ಕಾಣುತ್ತದೆ."

"ನಾನು ನೋಡುವಾಗೆಲ್ಲಾ ಹೀಗೇ ಇರುತ್ತಾಳೆ" ಎಂದನು ಗೋಪಾಲ.

"ಹೋಗಣ್ಣ! ನಿನಗೂ ಕೆಲಸವಿಲ್ಲ, ಅವರಿಗೂ ಕೆಲಸವಿಲ್ಲ" ಎಂದೆಂದು ಕಲ್ಯಾಣಿ ಒಳಕ್ಕೆ ನುಸುಳಿಬಿಟ್ಟಳು.

* * *

ರಾತ್ರಿ ಸುಮಾರು ಎರಡು ಗಂಟೆ ಇದ್ದೀತು. ಎಲ್ಲೆಲ್ಲಿಯೂ ಒಂದೇ ನಿಶ್ಶಬ್ದ. ಗೋಪಾಲನು ಬಂದ ಮೇಲೆ ಮಹಡಿಯಲ್ಲಿ ಕಲ್ಯಾಣಿ, ಗೋಪಾಲ, ನಾಗರಾಜ ಇವರಷ್ಟೇ ಮಲಗುವುದು ಬಳಕೆಯಾಗಿತ್ತು. ಶಾಸ್ತ್ರಿಗಳೂ ಲಕ್ಷ್ಮಮ್ಮನೂ ನಡುಗೋಣೆಯಲ್ಲಿಯೂ, ಶೇಷಜ್ಜಿ ಚಾವಡಿಯಲ್ಲಿಯೂ ಮಲಗಿಕೊಂಡಿದ್ದರು.

ಏನೋ ಕನಸುಕಂಡು ದಡಕ್ಕನೆ ಕಣ್ಣುಬಿಟ್ಟಿದ್ದಳು ಕಲ್ಯಾಣಿ. ಗೋಪಾಲನೊಡನೆ ಹೇಳೋಣವೆಂದು ತಿರುಗಲು, ಹಾಸಿಗೆಯಲ್ಲಿ ಅವನಿಲ್ಲ. ಸ್ವಲ್ಪ ತಡೆದುಕೊಂಡು ನೋಡಿದಳು; ಅನಂತರ ಹೆಚ್ಚಿದ ಕಳವಳದಿಂದಲೂ

ಭೀತಿಯಿಂದಲೂ ಕೂಡಿ ಗಟ್ಟಿಯಾಗಿ "ಅಣ್ಣಾ! ಅಣ್ಣಾ!" ಎಂದು ಕೂಗಿದಳು.

ಹೊರಗಡೆಯಲ್ಲಿ ಮಲಗಿಕೊಂಡಿದ್ದ ನಾಗು ತಟ್ಟನೆ ಕಣ್ಣುಬಿಟ್ಟನು. ಎದ್ದು ಅವಳ ಬಳಿಗೆ ಬಂದು "ಕಲ್ಯಾಣಿ! ಏನು ಸಂಗತಿ? ಯಾಕೆ ಕೂಗಿದಿ?" ಎಂದು ಕಣ್ಣುಜ್ಜಿಕೊಳ್ಳುತ್ತ ಕೇಳಿದನು.

"ಏನೋ ಕೆಟ್ಟ ಕನಸು ಕಂಡೆ. ಮತ್ತೇನಿಲ್ಲ. ನಾನು ಕೆಳಗೆ ಹೋಗಿ ಅಮ್ಮನ ಬಳಿ ಮಲಗುತ್ತೇನೆ. ನಿನ್ನ ಭಾವ ಎಲ್ಲಿಗಾದರೂ ಹೋಗುವುದಾಗಿ ನಿನ್ನೊಡನೆ ಹೇಳಿದ್ದರೋ?" ಎಂದು ಗುಟ್ಟಾಗಿ ಕೇಳಿದಳು.

ಅದಕ್ಕವನು—"ನನ್ನೊಡನೆ ಹೇಳಲಿಲ್ಲ. ಆದರೆ ಹೊರಗಿನ ಬಾಗಿಲು ತಾಳುಹಾಕಿದೆಯೋ ನೋಡಿಬರುತ್ತೇನೆ" ಎಂದಂದು, ಕೆಳಗೆ ಹೋಗಿ, ನೋಡಿ ಬಂದು, ಅದು ತೆರೆದಿದ್ದಿತೆಂದೂ ತಾನು ತಾಳುಹಾಕಿ ಬಂದಿದ್ದೆನೆಂದೂ ಹೇಳಿದನು. "ಸರಿ. ನಾನು ಕೆಳಗೆ ಹೋದರೆ "ಅವರು ಎಲ್ಲಿ" ಎಂಬ ಪ್ರಶ್ನೆ ಬರುತ್ತೆ. ಆದ್ದರಿಂದ ನಾನು ಕೆಳಗೆ ಹೋಗುವುದಿಲ್ಲ. ಅಣ್ಣಾ! ನಿನ್ನ ಹಾಸಿಗೆ ನನ್ನ ಕೋಣೆಗೇ ತಂದು ಹಾಕುತ್ತೀಯಾ?" ಎಂದಳು.

"ರಾತ್ರಿ ಹೇಗಿದ್ದ?"

"ಸಾಧಾರಣವಾಗಿ ಯಾವಾಗಿನಂತೆಯೇ ಇದ್ದರು."

ಸ್ವಲ್ಪಹೊತ್ತು ಇಬ್ಬರೂ ಮೌನ.

"ಕಲ್ಯಾಣಿ! ಬೀಗದಕೈ ಗೊಂಚಲಿದೆಯೋ ನೋಡು!"

ಕಲ್ಯಾಣಿ ತಲೆದಿಂಬನ್ನೆತ್ತಿ ನೋಡಲು ಬೀಗದಕೈ ಗೊಂಚಲು, ಕ್ರಮದಂತೆ ತಾನಿಟ್ಟಲ್ಲಿರದೆ, ಒಂದು ಬದಿಯಲ್ಲಿತ್ತು. ಫಳಕ್ಕೆಂದು ಅವಳಿಗೆ, ಯಾರೋ ಬೀಗದ ಗೊಂಚಲನ್ನೆತ್ತಿಕೊಂಡು ಬೆಕ್ಕಿನಂತೆ ನಡೆದು ಹೋದ ಹಾಗೂ, ಮತ್ತೆ ಹಾಗೆಯೇ ಅದನ್ನಲ್ಲಿ ತಂದಿಟ್ಟಹಾಗೂ ಕನಸಿನಲ್ಲಿ ನಡೆದಂತೆ ನೆನಪಿಗೆ ಬಂತು.

ಕಲ್ಯಾಣಿ ಸಿಡಿಲ್ದನಿಯನ್ನು ಕೇಳಿದ ಸರ್ಪದಂತೆ ದಿಗ್ಭ್ರಮಿಸಿದಳು. ಎಲ್ಲಾ ಅರ್ಥವಾಯಿತು. ತನ್ನ ಗಂಡ, ಸುರಳಿಯಾಂಡಿ ತಂದುಕೊಟ್ಟ ಹಣವನ್ನು ಹೊತ್ತುಕೊಂಡು ಓಡಿಬಿಟ್ಟಿದ್ದಾನೆ! ಇನ್ನು ಅವನನ್ನು ಕಂಡು ಹಿಡಿಯುವುದು ಕಷ್ಟ. ಏನು ಮಾಡುವುದೆಂದು ತಿಳಿಯದೆ ಚಡಪಡಿಸುತ್ತ,

ಆ ಕೋಣೆಯಲ್ಲಿ ಅತ್ತಿತ್ತ ನಡೆದಾಡಿದಳು. ಕಣ್ಣೀರು ಮಾಲೆಮಾಲೆಯಾಗಿ ಇಳಿಯಿತು....

ಅವಳ ಆ ಪರಿತಾಪಕರವಾದ ಪರಿಸ್ಥಿತಿಯನ್ನು, ನೋಡಲಾಗದ ನಾಗರಾಜನು—"ಹೋಗೇ ದಡ್ಡೀ! ಎಲ್ಲಿಗೆ ಹೋದಾನು? 'ಕತ್ತೆ ಹಾರಿದರೆ ಗದ್ದೇಬೇಲಿ' ಎಂಬಹಾಗೆ ಎಲ್ಲಿಯಾದರೂ ಸುತ್ತೀ ಸುತ್ತೀ ಬೆಳಿಗ್ಗೆ ಬಂದು ನಿಲ್ತಾನೆ ನೋಡು. ಇಷ್ಟೊಂದಕ್ಕೆ ಹೀಗೆಲ್ಲಾ ಅತ್ತು ಮೈಕೆಡಿಸಿ ಕೊಳ್ಳಬೇಡ. ಮಾತಾಡದೆ ಮಲಗು. ನಾನಿಲ್ಲಿಯೇ ಇದ್ದೇನೆ. ನೀನು ಸುಮ್ಮನೆ ಅತ್ತೂಗಿತ್ತೂ ಗೋಳಾಡಿ ಅಪ್ಪಾ-ಅಮ್ಮಾ ಎಲ್ಲರ ಮನಸ್ಸನ್ನೂ ಗಲಿಬಿಲಿ ಮಾಡಿಬಿಡಬೇಡ."

ಅವನು ಮನಸ್ಸಿನೊಳಗೆ—"ಗಂಡನು ಬೇರೆ ಹೆಣ್ಣಿನ ಮೇಲೆ ಕಣ್ಣಿಟ್ಟು ಹೋಗಿದ್ದಾನೋ ಎಂಬ ಸಂದೇಹದಲ್ಲಿ ಇವಳು ಅಳುತ್ತಿರಬೇಕು" ಎಂದೆಣಿಸಿದನು.

ಇವಳೋ—ಕೆಳಗೆ ಹೋಗಿ ಕಬ್ಬಿಣದ ಪೆಟ್ಟಿಗೆಯನ್ನು ತೆರೆದು ನೋಡಬೇಕೆಂಬ ಆತುರವು ಎದ್ದೆದ್ದು ಬಂದರೂ, ನಾಗಣ್ಣನಿಗೆ ಗೊತ್ತಾಗಿ ಬಿಟ್ಟರೆ ಏನಾದೀತೋ ಎಂದು ಹೆದರಿ, ಹೇಳಲೂ ಆಗದೆ, ನುಂಗಿಕೊಂಡಿರಲೂ ಆಗದೆ, ಬಹಳ ಸಂಕಟದಲ್ಲಿ ಸಿಕ್ಕಿಕೊಂಡು ಒಳಗೊಳಗೇ ನುಗ್ಗು ನುರಿಯಾಗುತ್ತಿದ್ದಳು.

# ಶಾಸ್ತ್ರಿಯವರ ಕೋಪ

ಬೆಳಗಿನ ಜಾವ ಸುಮಾರು ನಾಲ್ಕು ಗಂಟೆ ಇದ್ದೀತು. ನಿತ್ಯದ ಬಳಕೆಯಂತೆ ಶೇಷಜ್ಜಿ ಎದ್ದು, ಹಾಲ ಪಾತ್ರಗಳನ್ನು ಬೆಳಗುತ್ತ 'ಶುಕಮುನೀ ಹೇಳಿದರು ನಾರಾಯಣಾ ನಾಮ–ಪರೀಕ್ಷಿತಾ ಕೇಳಿದನು ನಾರಾಯಣಾ' ಎಂದು ಮೆಲ್ಲನೆ ಆಲಾಪಿಸತೊಡಗಿದ್ದರು. ಲಕ್ಷ್ಮಮ್ಮ ಕೊಟಡಿಯೊಳಗಿದ್ದಿಲ್ಲ. ಕಲ್ಯಾಣಿ ಅಡಿಮೇಲಡಿಯಿಟ್ಟು, ಬೆಕ್ಕಿನಂತೆ ನಡೆದುಬಂದು, ಕಬ್ಬಿಣದ ಪೆಟ್ಟಿಗೆಯನ್ನು ಸದ್ದಾಗದಂತೆ ತೆರೆದು, ನೋಟುಗಳ ಕಟ್ಟನ್ನಿಟ್ಟ ಡ್ರಾಯರನ್ನು ಎಳೆದುನೋಡಿದಳು. ಇಲ್ಲ! 'ಇರಲಿಕ್ಕಿಲ್ಲವೆಂದು ಮೊದಲೇ ಕಂಡ ವಿಷಯವಾದರೂ, ದುಃಖವೀಗ ಉಕ್ಕಿ ಬಂದುಬಿಟ್ಟಿತು. ಬಲು ಕಷ್ಟದಿಂದ ಹತ್ತಿಕ್ಕಿಕೊಂಡು, ಮೆಲ್ಲಮೆಲ್ಲನೆ ಮಹಡಿಯ ಮೇಲೇರಿ ಹೊದಿಕೆಯನ್ನು ಹೊದ್ದುಕೊಂಡು ಮಲಗಿಬಿಟ್ಟಳು.

ನಾಗರಾಜ ಸುಖವಾಗಿ ನಿದ್ದೆಮಾಡಿಕೊಂಡಿದ್ದನು. ಕಲ್ಯಾಣಿ ಎರಡು ಮೂರು ತಡವೆ ಅವನನ್ನೆಬ್ಬಿಸಿ ವಿಷಯವನ್ನು ಹೇಳಿಬಿಡಲೇ ಎಂದೆಣಿಸಿದಳು. ಆದರೆ ಧೈರ್ಯ ಬರಲಿಲ್ಲ.

ಬೆಳಕು ಹರಿಯಿತು. ಕಲ್ಯಾಣಿ ಎದ್ದು ಬರಲೇ ಇಲ್ಲ.

"ಎಲೋ ನಾಗು! ಕಲ್ಯಾಣಿ ಏಕೋ ಇನ್ನೂ ಏಳಲಿಲ್ಲ? ಮೆಟ್ಟಿಲ ಮೇಲೆ ನಿಂತುಕೊಂಡು ಒಂದು ಕೂಗು ಕೂಗು" ಎಂದಳು ಲಕ್ಷ್ಮಮ್ಮ.

ಸುಂದರಿ "ನಾನು ಮಾತ್ರ ಒಂದು ದಿನ ತಡಮಾಡಿ ಎದ್ದರೆ ಗೇಲಿ ಮಾಡ್ತಾಳೇ! ನಾನು ಹೋಗಿ ಸುಪ್ರಭಾತ ಗೀತ ಹಾಡುತ್ತೇನೆ. ಬಾಗಿಲಿಗೆ ಹೊರಗಿಂದ ಚಿಲಕ ಸಿಕ್ಕಿಸಿ ಬಿಡುತ್ತೇನೆ" ಎಂದಳು.

ಅಷ್ಟರಲ್ಲಿ ಅವಳಿದಿರು ಬಂದ ನಾಗು—"ಉಸ್! ಬಾಯಿಗೆ ಬಂದ ಹಾಗೆ ಬಗುಳದಿರೇ. ತಾನೇ ಇಳಿದು ಬರ್ತಾಳೆ" ಎಂದು ಕಡಿದಾಗಿ ನುಡಿದು ಕಣ್ಣಗಲಿಸಿ ನೋಡಿದನು.

ಗಂಟೆಯೂ ಎಂಟಾಯಿತು. ಪತಂಜಲಿ ಶಾಸ್ತ್ರಿಗಳ ಕಾಫೀ ಸೇವನೆಯೂ ಮುಗಿಯಿತು. "ನಾಗು ಎಲ್ಲಿ? ಗೋಪಾಲ ಇನ್ನೂ ಇಳಿದು ಬರಲಿಲ್ಲವೆ? ವಿಲಾಯಿತ್ತಾ ದೊರೆ, ಹಲ್ಲು ತಿಕ್ಕದೆಯೆ ಬೆಡ್‌ಕಾಫೀ ಕುಡಿದಾನು" ಎಂದರು.

ನಾಗು, ಅಲ್ಲಿದ್ದರೆ ಏನಾದರೂ ಹೇಳಬೇಕಾಗಿ ಬಂದೀತೆಂದು ಮೆಲ್ಲನೆ ಎಲ್ಲಿಗೋ ನುಸುಳಿಬಿಟ್ಟನು. ಆಗ ಸುಂದರಿ "ನಾಗು ಯಾರೋ ಹುಡುಗನ ಮನೆಗೆ ಹೋದ. ಭಾವನೂ ಅಕ್ಕನೂ ಇನ್ನೂ ಇಳಿದು ಬರಲಿಲ್ಲ" ಎಂದಳು.

"ಹುಡುಗಿ! ಸುಂದರಿ! ಹೋಗಿ ನೋಡೆ" ಎಂದರು ಶಾಸ್ತ್ರಿಗಳು.

"ಹೋಗಿ ನೋಡಿದೆ. ಅಕ್ಕ ಒಬ್ಬಳೇ ಇದ್ದಾಳೆ. ನಿಮ್ಮನ್ನು ಕರೆಯುತ್ತಾಳೆ."

"ಎಂಥದೇ ಅದು? ನನ್ನನ್ನು ಕರೆಯುವುದೇಕೆ? ಅಮ್ಮನನ್ನು ಬರಹೇಳಿದಳಾ?"

"ಇಲ್ಲಪ್ಪಾ, "ಅಪ್ಪನನ್ನು ಬರಲಿಕ್ಕೆ ಹೇಳು" ಎಂದೇ ಹೇಳಿದಳು."

ತಂದೆಯನ್ನು ನೋಡುತ್ತಲೇ "ಅಪ್ಪಾ!" ಎಂದು ಅಳುತ್ತಲೇ ಕಲ್ಯಾಣಿ ಎದ್ದಳು.

"ಏನಮ್ಮ? ಏನು?"

"ಬಾಗಿಲು ಹಾಕಿರಿ. ಹೇಳುತ್ತೇನೆ."

ಶಾಸ್ತ್ರಿಗಳು ಬಾಗಿಲು ತಾಳ ಹಾಕಿದರು.

"ಅವರು-ಅಳಿಯ-ನಿಮ್ಮಳಿಯ—" ಎಂದು ಮುಂದೆ ಹೇಳಲರಿಯದವಳಾಗಿ ತವಿಸಿದಳು ಕಲ್ಯಾಣಿ.

"ಏನೆ? ಏನು? ಅಳಿಯನಿಗೆ ಏನಾಯಿತು?"

"ಓಡಿಹೋಗಿಬಿಟ್ಟಿದ್ದಾರೆ."

"ಓಡಿಹೋಗಿಬಿಟ್ಟನೆ? ಎಲ್ಲಿಗೆ? ಯಾವಾಗ?"

"ಕಳೆದ ರಾತ್ರಿ."

"ನೀನು ಯಾಕೆ ಒಡನೇ ಹೇಳಲಿಲ್ಲ?"

"ಹೇಳಿ ಏನು ಲಾಭ? ಏನೂ ಪ್ರಯೋಜನವಿಲ್ಲಪ್ಪಾ. ಅವರೀಗ ಸಿಲೋನದ ಹಡಗಿನಲ್ಲಿ ಹತ್ತಿದ್ದಾರು. ಅಲ್ಲಿಂದ ವಿಲಾ—"

"ಅದೆಲ್ಲಾ ವ್ಯರ್ಥ ವೇಷ. ನಿನ್ನನ್ನು ಹೀಗೆ ಎಬ್ಬಿಸಿ ಹಾಕಿ ನನ್ನಿಂದ ಹಣ ಕಿತ್ತುಕೊಳ್ಳಬಹುದು. ಅಂತ ಸೋಗು. ಆ ಆಟವೆಲ್ಲಾ ಇಲ್ಲಿ ನಡೆಯದು. ಆ ತಿರುನೆಲ್ವೇಲಿ ಬೇಳೆ ಈ ಪನಂಗುಡಿ ನೀರಲ್ಲಿ ಬೇಯದು.

ನನ್ನಣ್ಣನವನು ತೋಟದ ಹರವೇಸೊಪ್ಪಂತ ತಿಳಿದುಬಿಟ್ಟನೊ? ಬರಲಿ, ಹೇಳುತ್ತೇನೆ."

ಈ ಮಾತುಗಳು ಅವಳ ಎದೆಯೊಳಗೆ ಇನ್ನೂ ಹುಣ್ಣು ಹುಣ್ಣು ಮಾಡಿದುವು.

"ಹೇಗೆ ಹೋದಾನು? ಬರೀಕೈ ಸೊಳಹಾಕೀತೆ? ಹಣ ಎಲ್ಲಿದೆ?" ಎಂದು ಕೇಳಿದರು ಶಾಸ್ತ್ರಿಗಳು.

"ನಾನು ಕೊಟ್ಟೆ" ಎಂದು ಭಯ-ವ್ಯಸನ ಮಿಶ್ರಿತ ಧ್ವನಿಯಿಂದ ಹೇಳಿ,—"ಕೊಟ್ಟುಬಿಟ್ಟೆ ಅಪ್ಪಾ, ಕ್ಷಮಿಸಬೇಕು" ಎಂದು ಧಡಾರನೆ ಅವರ ಕಾಲಿಗೆ ಅಡ್ಡಬಿದ್ದಳು.

ಪತಂಜಲಿ ಶಾಸ್ತ್ರಿಗಳು ಹುಟ್ಟಾ ಮುಂಗೋಪಿಗಳು. ಈ ಮಾತು ಕಿವಿಗೆ ಬೀಳುತ್ತಲೇ ಅವರ ಕೋಪವು ವೇಗವಾಗಿ ಉಕ್ಕಿಕೊಂಡಿತು. "ನೀನು ಕೊಟ್ಟುಬಿಟ್ಟೆಯಾ? ನಿನಗೆಲ್ಲಿಂದ ಹಣ?" ಎಂದು ಕೇಳುತ್ತಿದ್ದಾಗಲೇ, ಸುರಳಿಯಾಂಡಿ ಕೊಟ್ಟ ಹಣದ ನೆನಪು ಬಂದು.—"ಹುಂ, ಎಲೆ ಕಳ್ಳನಾಯಿ! ನನ್ನ ಹಣವನ್ನು ನನ್ನ ಅಪ್ಪಣೆಯಿಲ್ಲದೆ ತೆಗೆದು ಕೊಡಲಿಕ್ಕೆ ನಿನಗೆಷ್ಟು ಧೈರ್ಯ. ಹಂದಿಯೊಂದಿಗೆ ಸೇರಿದ ಕರುವೂ ಕೆಟ್ಟಿತಂತೆ. ಭೇಷ್! ಎಂಥಾ ಕಲ್ಲೆದೆ! ತಪ್ಪೆಂತ ತಿಳಿದೂ ಮಾಡಿ ಚಪ್ಪಡಿ ವಿದ್ಯೆ ತೋರಿಸುತ್ತಾಳೆ! ಆಟಕ್ಕೂ ಊಟಕ್ಕೂ ಸಲಿಗೆ, ಮೋಸಕ್ಕೂ ಮಾಟಕ್ಕೂ ಸಲಿಗೆ ಕೊಡ್ತಾರಂತ ಮಾಡಿದಿಯೇನೇ? ನಿನ್ನನ್ನು ಎಷ್ಟೋ ಪ್ರೀತಿಯಾಗಿ ಸಾಕಿದ್ದಕ್ಕೆ ನೀನು ನನಗೇ ನೀರು ತೋರಿಸಿದಿಯಾ? ತೆಗೆದು ಕೊಟ್ಟುಬಿಟ್ಟೇ ಅಂತ ನನ್ನ ಹತ್ತಿರವೇ ಹೇಳಬೇಕಾದರೆ! ಅಬ್ಬಾ! ನಿನ್ನನ್ನೇನು ಮಾಡಿದರೆ ಆಗದು! ಒಂದು ಕಾಸಾ—ಎರಡು ಕಾಸಾ! ಸುರುಳಿ ಸುರುಳಿಯಾಗಿ ಎರಡು ಸಾವಿರ! ಸರಿಯಾಗಿ ಇರುವಹಾಗಿದ್ದರೆ ನಾನೇ ಕೊಟ್ಟು ಕಳುಹಿಸುತ್ತೇನಂತ ಹೇಳಲಿಲ್ಲವೊ? ಇಷ್ಟು ಅಯೋಗ್ಯನಾದವನನ್ನು ನೀನು ತಿದ್ದುವುದು ಬಿಟ್ಟು ಅವನ ಕಳವಿಗೆ ಸಹಾಯ ಮಾಡುವುದೆ? ನಾನು ಮಿತಿಮೀರಿ ಕೊಂಡಾಟ ಮಾಡಿದ್ದರ ಫಲವಿದು. ನನ್ನ ಹೆತ್ತ ತಂದೆಯಾಯಿತಲ್ಲಾ, ಊರು ಮನೆ ಬಿಟ್ಟು ಈ ಪಟ್ಟಣದಲ್ಲಿ ಬಂದಿದ್ದಾರಲ್ಲಾ ಎಂಬ ಯೋಚನೆ! ಛೀ! ಒಂಟೀ ಹಾಗೆ ತಂಗಿ ಬೇರೆ

ಮದುವೆಗೆ ತಯಾರಾಗಿ ನಿಂತಿದ್ದಾಳೆ; ಅಣ್ಣ ತಮ್ಮಂದಿರು ಕಲೀಬೇಕು, ಎಂಬ ಚಿಂತೆಯೂ ಇಲ್ಲದೆ, ಎರಡು ಸಾವಿರವನ್ನೂ ಎತ್ತಿ ಕೊಟ್ಟುಬಿಟ್ಟು ನನಗೆ ಕಿವಿ ಕುತ್ತಲಿಕ್ಕೆ ನೋಡುತ್ತೀ. ಸ್ತ್ರೀಸಾಹಸಾ ಅಂದರೆ ಸುಳ್ಳಲ್ಲ. ಏನಾದರೂ ಅತ್ತು ಕೂಗಿ ನಾಟಕವಾಡಿಬಿಟ್ಟರೆ ಸರಿಹೋಗಿಬಿಡುತ್ತದೆ, ಅಂತ ನೆನೆಸಿದೆಯಾ? ಅದಕ್ಕೆಲ್ಲಾ ಸಣ್ಣಾಗುವವನಲ್ಲ ಈ ಪತಂಜಲಿ. ಈಗಲೇ ಪೋಲೀಸಿಗೆ ಆ ನೋಟುಗಳ ನಂಬರಗಳನ್ನು ತಿಳಿಸಿ, ಮೂಲೆ ಮೂಲೆಗೆ ತಂತಿಕೊಟ್ಟು, ಅವನಿಗೆ ಮೂಗುದಾರಹಾಕಿ ಎಳೆಸಿ ತರಿಸದಿದ್ದರೆ ನಾನು ಪತಂಜಲಿಯಲ್ಲ" ಎಂದು ಶಪಥಮಾಡಿದರು.

"ಅಪ್ಪಾ! ಅಪ್ಪಾ! ಈ ಒಂದುಬಾರಿ ಮಾತ್ರ ನನ್ನನ್ನು ಮನ್ನಿಸಿರಿ. ಇನ್ನು ಮೇಲೆ ಹೀಗೆಂದೂ ಮಾಡಲಾರೆ. ಏನೋ ತಿಳಿಯದೆ ಮಾಡಿಬಿಟ್ಟೆ" ಎಂದು ಅವರ ಎರಡು ಕಾಲುಗಳನ್ನು ಹಿಡಿದು ಅಂಗಲಾಚಿ ಬೇಡಿದಳು ಕಲ್ಯಾಣಿ.

"ಹುಚ್ಚು ನಾಯಿ!" ಎಂದು ಕಾಲುಗಳನ್ನು ಕೊಡಹಿಕೊಂಡು "ತಿಳಿಯದೆ ಮಾಡಿದಿಯಾ? ಎಷ್ಟು ಮುನ್ಯೋಚನೆಮಾಡಿ, ಸೋಮವಾರ ಬ್ಯಾಂಕಿನಲ್ಲಿ ಕಟ್ಟಿಬಿಡುತ್ತಾರೆ ಅಂತ ತಿಳಿದೇ ತೆಗೆದುಕೊಟ್ಟೆದ್ದಿ. ಕುದುರೆ ಕೆಡವಿದ್ದಲ್ಲದೆ ಗುಳಿಗೇ ಹಾಕಿತು! ತಿಳಿಯದೆ ಮಾಡಿದೆನೆಂದರೆ ಸುಲಭವಾಗಿ ತಪ್ಪಿಸಿಕೊಳ್ಳಬಹುದೆಂದು ಎಣಿಕೆಯೊ? ನಿನ್ನನ್ನು ಪ್ರೀತಿಯಿಂದ ಬೆಳೆಸಿದ್ದಕ್ಕೆ ಇದೂ ಮಾಡಿದಿ, ಇನ್ನೂ ಮಾಡುವಿ. ಯಾವಾಗ ಆ ಗಜಪೋಕ್ರಿಯನ್ನು ಹುಡುಕಿ ಹಿಡಿದು ನಿನ್ನನ್ನು ಕೊಟ್ಟೆನೋ, ಅಂದೇ ನನ್ನನ್ನು ಏಳುವರೆ ಪಾದ ಹಿಡಿಸಿಬಿಟ್ಟೆ. ಪಟ್ಟಣದಲ್ಲಿ 'ಜಲ್ಸಾ' ಮಾಡಿಕೊಂಡು ಅವನು ಕೇಳಿದಾಗೆಲ್ಲಾ ಹಣ, ನನ್ನ ಹಣ ತಿಂದು ತಿಂದು ಚೆನ್ನಾಗಿ ರುಚಿ ಕಂಡವ! ಬೇಕು! ಇದೂ ಬೇಕು ನನಗೆ! ಇನ್ನೂ ಬೇಕು! ನನ್ನ ವಿಧಿ!" ಎಂದು ತಲೆಯನ್ನು ಚಚ್ಚಿಕೊಂಡರು.

ಕವುಚಿ ಬಿದ್ದಿದ್ದ ಕಲ್ಯಾಣಿ ಏಳಲೇ ಇಲ್ಲ. ಕಲ್ಲೂ ಕರಗುವಂತಿತ್ತು ಅವಳ ನೆಲೆ. ಪತಂಜಲಿ ಶಾಸ್ತ್ರಿಗಳು ಅವಳನ್ನು ದುರ್ಲಕ್ಷಿಸಿ, ಕೆಳಗೆ ಹೋಗಿಬಿಡಲು ಬಾಗಿಲನ್ನು ತೆರೆದರು. ಅಲ್ಲಿ ಒಳಗೆ ನಡೆದುದೆಲ್ಲವನ್ನೂ ಹೊಂಚಿ ಕೇಳುತ್ತಿದ್ದ ಲಕ್ಷ್ಮಮ್ಮನನ್ನು ನೋಡಿದರು.

ಅವಳನ್ನು ನೋಡುತ್ತಲೇ ಅವರ ಕೋಪವು ಇನ್ನೂ ವಿಶ್ವರೂಪಕ್ಕೆ ವ್ಯಾಪಿಸಲಾರಂಭವಾಯಿತು. "ಓಹೊ ಹೊ'! ಅಮ್ಮಾ ಅವರು ಸಿ.ಐ.ಡಿ. ಉದ್ಯೋಗವಾಡ್ತಾರೇ'! ನೀನೂ, ನಿನ್ನ ಮಗಳೂ, ಅಳಿಯನೂ ಎಲ್ಲಾ ಒಂದು ಕಟ್ಟಿಕೊಂಡು ಅಳಿ! ನಾಶವಾಗಿ ಹೋಗಿ!" ಎಂದು ಅಹಂಕಾರ ದಿಂದ ಅವಳನ್ನು ಒಡಿದು ಒಳಗೆ ತಳ್ಳಿದರು.

ಬಹಳ ವರ್ಷದಿಂದ ಅವರ ಕೋಪವನ್ನಿದಿರಿಸಿ ಹೋರಾಡಿ ಅನುಭವ ಪಟ್ಟಿದ್ದವಳು ಲಕ್ಷ್ಮಮ್ಮ. ಬಿದ್ದು ತಾಗಿದ್ದನ್ನೂ ಲಕ್ಷ್ಯಮಾಡದೆ, ಚಟ್ಟನೆದ್ದು ಲಗುಬಗೆಯಾಗಿ ಅವರಿಗಿಂತ ಮುಂದಾಗಿ ಕೆಳಗೆ ಹೋಗಿ, ಬೀದಿ ಬಾಗಿಲನ್ನು ಇಕ್ಕಿ ತಾಳಹಾಕಿದಳು. ಮತ್ತೆ ಬಂದು ಪತಿಯ ಎರಡು ಕೈಗಳನ್ನೂ ಹಿಡಿದು—"ನಾನು ಹೇಳುವುದನ್ನು ಕೊಂಚ ಕೇಳಿ, ಏನು ಮಾಡಬೇಕೋ ಮತ್ತೆ ಮಾಡಿ" ಎಂದು ದೀನಳಾಗಿ ಬೇಡಿಕೊಂಡಳು.

ಅಷ್ಟರಲ್ಲಿ ಏನು ವಿಷಯವೆಂದು ಗೊತ್ತಾಗದೆ, ಸುಂದರಿಯೂ, ಶ್ಯಾಮಳೆಯೂ ಅಳಲಾರಂಭಿಸಿದರು. ಆಗತಾನೇ ಅಲ್ಲಿಗೆ ಬರುತ್ತಿದ್ದ ಶೇಷಜ್ಜಿ, ಪಿಳಿಪಿಳಿ ಕಣ್ಣಗಲಿಸಿದರು. ಶಾಸ್ತ್ರಿಗಳ ಮುಖದಲ್ಲಿ ಎಳ್ಳು ಹೊಟ್ಟು ತ್ತಿದ್ದಿತು. ಸಿಟ್ಟಿನಿಂದ ನಡುಗುತ್ತ ಮಡದಿಯ ಹಿಡಿಕೆಯನ್ನು ಬಿಡಿಸಿ ಕೊಂಡು, "ಹೋಗಾಚೆ! ಮಗಳ ಪಕ್ಷಗಟ್ಟಿ ಮಾತಾಡ್ತೀ! ಗೊತ್ತಿಲ್ಲದ ಹುಡುಗಿಯಂತೆ! ಬಾಯಿಗೆ ಬೆರಳಿಟ್ಟರೆ ಕಚ್ಚಲಿಕ್ಕೆ ಬಾರದು! ಮೂರು ಮಕ್ಕಳಿಗೆ ತಾಯಾಗತಕ್ಕ ವಯಸ್ಸಾಗಿದೆ! ಗೊತ್ತಿಲ್ಲವಂತೆ! ನಾಟಕ ಮಾಡಲಿಕ್ಕೆ ಗೊತ್ತಿದೆ!"

"ಹೋಗಲೀ! ಬಿಡೀ ಅವಳನ್ನಾ'! ನಾನು ಹೇಳ್ಳೋದನ್ನ ಕೇಳಿ ಆಮೇಲೆ ನಿಮ್ಮಿಷ್ಟ ಪ್ರಕಾರ ಮಾಡೀ" ಎಂದು ಕೆಂಜಿ ಕೇಳಿಕೊಂಡಳು ಲಕ್ಷ್ಮಮ್ಮ.

ಶಾಸ್ತ್ರಿಯವರನ್ನು ಹೊರಗೆ ಹೋಗದಂತೆ ತಡೆಯುವುದು ಭಗೀರಥ ಪ್ರಯತ್ನವಾಗಿಬಿಟ್ಟಿತು. ಅಷ್ಟರಲ್ಲಿ ವಿಷಯವನ್ನೆಲ್ಲ ಊಹಿಸಿ ತಿಳಿದ ಶೇಷಜ್ಜಿ ಅವರನ್ನು ಸಮಾಧಾನಮಾಡುತ್ತ ಹೀಗೆಂದರು:

"ಏನೋ ಅಪ್ಪಾ ಇದು? ಬಿಟ್ಟು ಬಿಡು! ಹೋದರೆ ಹೋಗಲಿ! ಅಲ್ಪಾಲ್ಪವಾದ ಆ ಕಾಸು ಹಿರಿದಾ ಮಾನ ಹಿರಿದಾ? ಅದೂ ನಮ್ಮ ಹಣ

ಎಲ್ಲಿಗೆ ತಾನೇ ಹೋದದ್ದು. ನಮ್ಮ ಸೊಂತ ಅಳಿಯನಿಗೆ ತಾನೆ?" ಅದರಿಂದೇನಪ್ಪಾ! ಏನೋ ದೊಡ್ಡ ಪ್ರಳಯಕಾಲದ ರುದ್ರಾವತಾರ ಬೇಡವ್ರೋ? ಅರ್ಬುತ್ನಾಟ್ ಕಂಪಿನೀಲಿ ಹತ್ತು ಸಾವಿರ ರೂಪಾಯಿ ಹಾಕಿದ್ದರು ನಿಮ್ಮಪ್ಪ. ಅದಷ್ಟೂ ಮುಳುಗಿಹೋದಾಗ ಕೂಡ ಇಷ್ಟು ಗದ್ದಲ ಮಾಡಿಲ್ಲ ಅವರು! ನೀನು ಇಷ್ಟೊಂದಕ್ಕೆ ಹೀಗೇಕೆ ಕೋಪಾಟೋಪ ಮಾಡುತ್ತೀ? ನೀನೂ ಅವನಿಗೆ ಕೊಡುತ್ತೇನೇಂತ ಒಮ್ಮೆ ಹೇಳಿಯೇ ಇದ್ದೀ. ಆದ್ದರಿಂದ ಕೊಟ್ಟುಬಿಟ್ಟಳೋ ಏನೋ ಪಾಪ! ಅದನ್ನೀಗ ಡಂಗುರ ಸಾರೋದಾ ನೀನು? ಪೋಲೀಸಿಗೆ ತಿಳಿಸಿಬಿಟ್ಟರೆ ಆ ಅವಮಾನ ಯಾರಿಗಪ್ಪಾ? ಇಂಥವರ ಅಳಿಯ ಅಂತ ನಾಳೆಗೇ ಪೇಪರ್ನಲ್ಲಿ ಹಾಕಿ ಬಿಡ್ತಾರೇ. ಅನಂತರ ಊರವರ ಬಾಯಿಗೆ ಅವಲಕ್ಕಿ ಸಿಕ್ಕಿದ ಹಾಗೆ. ಆಗ ನಮ್ಮದು ಬಿಡು, ಈ ಮಗುವಿನ ಮನಸ್ಸು ಹ್ಯಾಗಾದೀತು! ಅಲ್ಲಾ, ಅವ, ಇವಳು ಹೇಳೋ ಹಾಗೆ ಸೀಮೇಗೇ ಹೋಗಿ ಕಲ್ತು, ಕಲೆಕ್ಟರಾಗಿ ದೊಡ್ಡ ಪದವಿಯೇರಿ ಬಂದಾಗ, ನಾವು ಹೀಗೆ ಮಾಡಿದ್ದೆಲ್ಲಾ ಮನಸ್ಸಿನಲ್ಲಿಟ್ಟು ಕೊಂಡು, ಈ ಹುಡುಗೀನ ಬಾಳಗೊಳಿಸದೆ ಬಿಟ್ಟುಬಿಟ್ಟರೆ, ಆ ಪಾಪವನ್ನು ಯಾರಪ್ಪಾ ಕಟ್ಟಿಕೊಳ್ಳೋದು? ನಮ್ಮ ಪ್ರಾಂತದಲ್ಲೆಲ್ಲಾ ಹೆಣ್ಣಿನ ಮೇಲೆ ಹೆಣ್ಣು ಕೊಡುತ್ತೇವೆಂತ ನೂರು ಮಂದಿ ಬರುವವರಿದ್ದಾರೆ. ಹಾಗಿರು ವಾಗ, "ತಂತೀ, ಪೋಲೀಸು—" ಅಂತೆಲ್ಲಾ ಹೇಳುತ್ತೀಯಲ್ಲ? ನಿನ್ನ ಬುದ್ಧಿವಂತಿಕೆ ನನಗೊಂದೂ ಅರ್ಥಾಗೋದಿಲ್ಲ! ನಿನ್ನ ಮಗಳನ್ನ ಹೀಗೆ ಹಿಸುಕಿ ಹಾಳು ಮಾಡಬೇಡವ್ರೋ! ಎಲ್ಲಿಯಾದರೂ ಪ್ರಾಣಗೀಣ ಕಳಕೊಂಡಾಳೋ! ನಮ್ಮಪ್ಪ!" ಎಂದಳು.

ಶಾಸ್ತ್ರಿಯವರು ಏನೂ ಮಾತಾಡದೆ ಒರಗು ಕುರ್ಚಿಯ ಮೇಲೆ ಒರಗಿಬಿದ್ದರು.

# ಸಹೃದಯ ಸಹೋದರ

ಫಾಲ್ಗುಣ ಮಾಸ. ಮಯಿಲಾಪುರದ ಕಪಾಲೀಶ್ವರ ದೇವಾಲಯದಲ್ಲಿ ಉತ್ಸವ. ಬೀದಿಗಳಲ್ಲೆಲ್ಲಾ ಒಂದೇ ಗದ್ದಲ—ಗೌಜು—ಗಲಾಟೆ. ದೇವೋತ್ಸವ ವನ್ನು ನೋಡಲು ಜನರೆಲ್ಲಾ ಮಿಗೆ ಮಿಗೆ ಕುತೂಹಲದಿಂದ ನಡೆದುಕೊಂಡಿದ್ದರು. "ಗಾವುದ ದೂರ ನಡೆದಾದರೂ ವೃಷಭವಾಹನವನ್ನು ನೋಡದಿದ್ದರೆ ಕತ್ತೆಯಾಗಿ ಹುಟ್ಟುತ್ತಾರಂತೆ. ಏನೋ ಅಪ್ಪಾ! ಮಕ್ಕಳನ್ನಾದರೂ ಕರೆದುಕೊಂಡು ಹೋಗಬಾರದೆ?" ಎಂದರು ಶೇಷಜ್ಜಿ.

"ಇರುವ ಚೆಂದಕ್ಕೆ ಉತ್ಸವವೊಂದು ಬಾಕಿ. ನೀನು ಬೇಕಾದರೆ ಹೋಗು" ಎಂದರು ಶಾಸ್ತ್ರಿಗಳು.

"ನಿನಗಾಗಿ ಅಲ್ಲದಿದ್ದರೂ ಕಲ್ಯಾಣಿಗಾಗಿಯಾದರೂ ಹೋಗಿ ಬಾ ಅಪ್ಪಾ. ಒಂದೇ ಭ್ರಮೆಹಿಡಿದು ಕೂತುಬಿಟ್ಟಿದ್ದಾಳೆ. ದಿನಾ ನಾಗೂ ಹತ್ತಿರ ಇಂಗ್ಲೀಷ್ ಪೇಪರ್ ತರಲಿಕ್ಕೆ ಹೇಳಿ, ಕಲೆಕ್ಟರ್ ಪರೀಕ್ಷೆಗೆ ಕಟ್ಟಿದವರ ಫೋಟೋ ಬರುತ್ತಂತಲ್ಲಾ ಅದು ಬಂದದಾ ನೋಡ್ತಾಳೆ. ಅವನ ಹತ್ತಿರದಿಂದ ಕಾಗದವೂ ಕಾಣೇ. ಏನು ಸಂಗತಿಯೋ ಯಾರಿಗೆ ಗೊತ್ತು?"

ಹೀಗೆನ್ನುತ್ತಿದ್ದಾಗ ಬೀದಿಯಲ್ಲಿ ಜನರು ಸಂತೋಷದಿಂದ ಕೂಗಾಡುತ್ತಿರುವುದು ಕೇಳಿಸಿತು. ನಡೂಗಡೆ ಓರ್ವ ಹಿರಿಯರು ಕೌಪೀನಧಾರಿಗಳಾಗಿ ಬರುತ್ತಿರಲು, ಅವರ ಸುತ್ತೂ ಕೂಗಿಡುತ್ತ ಹುಡುಗರೆಲ್ಲ ಬರುತ್ತಿದ್ದರು. "ಅದ್ಭುತ ಕಲ್ಪಕವೇ, ಆನಂದ ಕಲ್ಪಕವೇ, ಪರಬ್ರಹ್ಮ ಕಲ್ಪಕವೇ" ಎಂದು ಉಚ್ಚಸ್ವರದಿಂದ ಕೂಗುತ್ತಿದ್ದರು ಆ ಕೋಮುಣಾಂಡಿ.

"ಅಪ್ಪಾ! ಅಪ್ಪಾ! ಪರಬ್ರಹ್ಮಸ್ವಾಮಿ ಅಂತಾರಲ್ಲಾ, ಅವರು ಹೋಗುತ್ತಿದ್ದಾರೆ" ಎಂದು ರಂಗನು ಬೀದಿಬದಿಯಿಂದ ಕೂಗಿದ. ಎಲ್ಲರೂ ಎದ್ದು ಹೊರಗೆ ಬಂದರು.

ಮದರಾಸು ವಾಸಿಗಳೆಲ್ಲರಿಗೂ 'ಪರಬ್ರಹ್ಮಸ್ವಾಮಿ' ಎಂದರೆ ಚೆನ್ನಾಗಿ ಗೊತ್ತು. ಕಳೆದ ಐದಾರು ವರ್ಷಗಳಿಂದ ಮೈಲಾಂಬಾ ಸನ್ನಿಧಿಯಲ್ಲಿಯೇ ಅವರು ಅನೇಕಕಾಲ ವಾಸಮಾಡುತ್ತಿದ್ದರು. 'ಕಂದಸ್ವಾಮಿ' ದೇವಾಲಯಕ್ಕೂ ತಿರುವತ್ರಿಯೂರಿನಲ್ಲಿರುವ 'ಪಟ್ಟಿನತ್ತಾರ್ ಸಮಾಧಿ'ಗೂ,

ತಿಂಗಳಿಗೊಮ್ಮೆ ಹೋಗಿ ಸುತ್ತಾಡಿ ಬರುತ್ತಿದ್ದರು. ಮಯಿಲಾ ಮಹಾ ಜನಗಳೆಲ್ಲಾ ಅವರನ್ನು 'ಪರಬ್ರಹ್ಮಸ್ವಾಮಿ'ಗಳೆಂದೂ, ಮಕ್ಕಳೆಲ್ಲಾ 'ಕಲ್ಸಕ್ಕರೇ ಸ್ವಾಮಿ'ಗಳೆಂದೂ ಕರೆಯುವುದು ಬಳಕೆ. ಏಕೆಂದರೆ ಅವರು ಊರೊಳಗಿನ ಮಕ್ಕಳಿಗೆಲ್ಲಾ ಕಲ್ಲುಸಕ್ಕರೆ ಕೊಂಡುಕೊಂಡು ಕೊಡುತ್ತಿದ್ದರು.

ಮೈಲಾಪುರದಲ್ಲಿ ಎಲ್ಲರಿಗೂ ಅವರ ಮೇಲೆ ಗೌರವವಿತ್ತು. ಬೀದಿ ಯಲ್ಲಿ ಯಾರಾದರೂ ಕೊಂಚ ಅಶೌಚಮಾಡಿದರೂ, ದುರ್ಭಾಷೆ ಯಾಡಿದರೂ ದೌಡೆಯ ಮೇಲೆಯೇ ಛಟೀಲನೆ ಹೊಡೆದುಬಿಡುವರು. ಒಳ್ಳೆಯ ಓದುಳ್ಳವರು ಕೂಡ. ಮಾತಾಡಲಾರಂಭಿಸಿದರೆ ತೀರಿತು, 'ತಿರುವರುಳ್‌ಪಾ' 'ತಾಯುಮಾನವರ್ ಪಾಡಲ್' ಮೊದಲಾದುವುಗಳ ನುಡಿಗಳನ್ನು ನಡುವೆ ತಾರದೆ ಇರುವುದಿಲ್ಲ. ಆದರೆ ಅರ್ಧದಲ್ಲಿಯೇ ಅಕಸ್ಮಾತ್ತಾಗಿ ಮಾತನ್ನು ನಿಲ್ಲಿಸಿ "ಅದ್ಭುತ ಕಲ್ಪಕವೇ—" ಎಂಬ ಪಲ್ಲವಿಯೊಂದಿಗೆ ಓಡಿಬಿಡುವರು.

ಪತಂಜಲಿ ಶಾಸ್ತ್ರಿಗಳಿಗೂ ಆ ಸ್ವಾಮಿಗಳ ಮೇಲೆ ವಿಶ್ವಾಸವಿತ್ತು. ಅದರ ಮೇಲೆ ಅವರನ್ನು ಕುರಿತು ಕೆಲವು ಮಹಿಮೆಗಳನ್ನು ಅವರು ಕೇಳಿ ದ್ದರು. ಆದ್ದರಿಂದ ಅವರು ಬೀದಿಗಿಳಿದು, ಕೈಜೋಡಿಸಿ, ಸ್ವಾಮಿಗಳನ್ನು ತಮ್ಮ ಜಗುಲಿಯಲ್ಲಿ ಕುಳಿತುಕೊಳ್ಳಬೇಕೆಂದು ಕೇಳಿಕೊಂಡರು.

ಕಲ್ಯಾಣಿಯೂ ಉಳಿದ ಹುಡುಗರೂ ಉತ್ಸವಕ್ಕೆ ಹೋಗಿ ಸ್ವಲ್ಪ ಹೊತ್ತಾಗಿತ್ತು. ಲಕ್ಷ್ಮಮ್ಮ ಏನೋ ಯೋಚಿಸುತ್ತ ಕುಳಿತಿದ್ದಳು. ಶೇಷಜ್ಜಿ ಉಯ್ಯಾಲೆಯಲ್ಲಿ ಕಾಲು ಕೆಳಗೆಬಿಟ್ಟು ಆಡಿಸುತ್ತ ಕುಳಿತಿದ್ದರು. "ಅತ್ತೇ, ನಿನ್ನೆಯಿಂದ ಒಂದು ಸಂಗತಿ ನಿಮ್ಮ ಹತ್ತಿರ ಹೇಳಬೇಕೂ ಅಂತ ಮಾಡಿ ದ್ದೇನೆ. ಆಗಲೇ ಇಲ್ಲ. ನಿಮ್ಮ ಮಗನಿಗೆ ಗೊತ್ತಾಗಬಾರದು" ಎಂದು ಲಕ್ಷ್ಮಮ್ಮ ಹೇಳಲು, ಶೇಷಜ್ಜಿ—"ಲಕ್ಷ್ಮಿ, ನಾ ಹೇಳೋದು ಕೇಳು. ಕಲ್ಯಾಣಿ ವಿಷಯದಲ್ಲಿ ನೀನೂ ತುಂಬ ಜಾಗರೂಕಳಾಗಿರಬೇಕು. ಹೊರಗೆ ಹೋದರೆ ನಾಚಿಕೆ. ವಿಲಾಯ್ತಿಗೆ ಹೋಗಲಿಕ್ಕೆ ಹಣವನ್ನು ತೆಗೆದುಕೊಟ್ಟೆ ಳಲ್ಲಾ, ಹೋದವನು ಅವಳಿಗಾಗಲೀ ನಮಗಾಗಲೀ ಒಂದು ಕಾಗದ ಹಾಕಿದನಾ? ಮಹಾ ಕಿರಾತ! ವಿಲಾಯ್ತಿಗೇ ಹೋದದ್ದಂತ ಅದಾದರೂ ಗೊತ್ತಿದೆಯೆ? ಎಂಟು ತಿಂಗಳಾಯಿತು. ಅಲ್ಲದಿದ್ದರೆ ಎಲ್ಲಿಯಾದರೂ

ಕುಡಿದುಕುಣಿದು ತಿರಿದಾಡುತ್ತಿದ್ದಾನೋ ಏನೋ. ಯಾರಿಗೆ ಗೊತ್ತು! ಅಪ್ಪನ ಹತ್ತಿರ ಕೇಳೋಣ ಅಂದರೆ ಎಲ್ಲಿಯಾದರೂ ಅವಳ ಕಿವಿಗೆಲ್ಲಾ ಬಿದ್ದು ಆಗಬಾರದ್ದು ಆಗಿಬಿಟ್ಟೇತು ಅಂತ ಭಯವಾಗುತ್ತದೆ. ಗುಡಿಯೋ, ಕೊಳವೋ, ತೋಟವೋ, ಬೀಚೋ ಎಲ್ಲಿಗೂ ಹೋಗಲಾರೇ ಅಂತ ಒಂದೇ ಭ್ರಮೆ ಹತ್ತಿದವಳಾಗಿದ್ದಾಳೆ. ನೀನು ರಹಸ್ಯವಾಗಿ ಕೇಳು. ಅವಳಿಗೆ ಗೊತ್ತಾಗಬಾರದು. ಇಲ್ಲದಿದ್ದರೆ ಅವನ ಮುಂಗೋಪದಲ್ಲಿ, ಸಂತೀ ನಡುವೆ ಅವಲಕ್ಕಿ ಬುಟ್ಟಿ ಚೆಲ್ಲಿದ ಹಾಗಾದೀತು" ಎಂದು ವ್ಯಾಕುಲಚಿತ್ತರಾಗಿ ನುಡಿದರು.

"ಅದನ್ನೇ ನಾನು ಹೇಳಲಿಕ್ಕೆ ಬಾಯಿತ್ತಿದೆ ಅತ್ತೇ. ನೀವೇ ಕೇಳಿದಿರಿ. ವಿಲಾಯ್ತಿಗೆ ಹೋದ್ದೇ ನಿಜವಂತೆ. ಪಾಸ್‌ಪೋರ್ಟ್ ಫೋಟೋ ಎಲ್ಲಾ ನೋಡಿದೆವೆಂದು ಕಲ್ಯಾಣಿಯೂ, ನಾಗುವೂ ಹೇಳಿದರು. ಬೊಂಬಾಯಲ್ಲಿ ಮಾತುಂಗಾದಲ್ಲಿ ಬಡಗುಡಿ ಎಚ್ಚುಮಿಪಿಳ್ಳೆಯ ಮನೆಯಲ್ಲಿಯೇ ಇಳಿದುಕೊಂಡನಂತೆ. ಮಾವನವರು ಹಣಕೊಟ್ಟು ಕಳುಹಿಸಿದ್ದಾರೆ ಎಂದು ಹೇಳಿದನಂತೆ. ನಾನೂ ನಿನ್ನೆವರೆಗೆ ನಿಮ್ಮ ಹಾಗೇ ಹೇಳಲಿಕ್ಕೂ ಆಗದೆ ನುಂಗಲಿಕ್ಕೂ ಆಗದೆ ಕಷ್ಟಪಡುತ್ತಿದ್ದೆ. ಮೊನ್ನೆ 'ಅಧಿಕಾರ ನಂದಿ ಸೇವೆ'ಗಾಗಿ ಗಣಪತ್ಯೆಯರ ಮನೆಯ ಮುಂದೆ ಸ್ವಲ್ಪ ನಿಂತೆ. ಆಗ ಅವರ ತಮ್ಮನ ಮಗಳು ಬೊಂಬಾಯಿಂದ ಬಂದವಳು ನನ್ನನ್ನು ಗುರುತು ಹಿಡಿದು ಕೇಳಿದಳು. "ನಿಮ್ಮಳಿಯನಿಂದ ವಾರಾ ವಾರಾ ಕಾಗದ ಬರುತ್ತದಾ? ಸೆಲೆಕ್ಷನ್ ಆಯಿತಾ? ನೀವು ತಿಂಡಿಗಿಂಡಿ ಉಪ್ಪಿನಕಾಯಿ ಏನಾದರೂ ಕಳುಹಿಸುವ ಹಾಗಿದ್ದರೆ, ನನ್ನ ತಮ್ಮ ಎಡಿನ್‌ಬರೋವಿಗೆ ಹೋಗುತ್ತಾನೆ. ದಾರಿಯಲ್ಲಿ ಕೊಡಲಿಕ್ಕೆ ಹೇಳುತ್ತೇನೆ, ಎಂತ ಭಾರೀ ಭಾರೀ ಮಾತಾಡಲಿಕ್ಕೆ ಹತ್ತಿಬಿಟ್ಟಳು. ಏನು ಉತ್ತರ ಕೊಡುವುದೆಂದೇ ನನಗೆ ತೋರಲಿಲ್ಲ. ಮೆದ್ದೂ ನುಂಗಿಯೂ ಏನೋ ಹೇಳಿದೆ: ಹೋಗಿದ್ದಾನೆ ಎಂಬ ಸುದ್ದಿ ತಿಳಿಯಲಿಕ್ಕೇ ಇಷ್ಟು ಕಾಲವಾಯ್ತು. ಉಳಿದ ಸುದ್ದಿ ಎಲ್ಲಾ ಯಾರಾದರೂ ಹೇಳಿದರೇನೇ ಉಂಟು. ನಾವು ಮಾಡಿದ ಘಾಗ್ಯ. ಗಿಳಿಯನ್ನು ಬೆಳೆಸಿ ಬೆಕ್ಕಿನ ಬಾಯಿಗೆ ಕೊಟ್ಟಾಯಿತು. ಇನ್ನೇನು ಮಾಡುವುದು?" ಎಂದು ಲಕ್ಷ್ಮಮ್ಮ ನಿಟ್ಟುಸಿರಿಟ್ಟಳು.

ದೀಪ ಹಚ್ಚುವ ಹೊತ್ತು. ಆರು ಗಂಟೆ ಇದ್ದೀತು. ಕಲ್ಯಾಣಿ ಮೊದಲ ಕೊಟಡಿಯಲ್ಲಿ ಕುಳಿತುಕೊಂಡು ಏನೋ ಓದಿಕೊಳ್ಳುತ್ತಿದ್ದಳು. ಶಾಸ್ತ್ರಿಗಳೂ, ಇತರ ಮಕ್ಕಳೂ, ಲಕ್ಷ್ಮಮ್ಮನೂ ಮಾಂಬಲಂಗೆ ಹೋಗಿದ್ದರು. ಶೇಷಜ್ಜಿ ಕೋಣೆಯಲ್ಲಿ ಕುಳಿತುಕೊಂಡು, "....ಬಿಚ್ಚಿಬಿಟ್ಟು, ಮೋಯಬಿಟ್ಟು, ಅಜ್ಞಾನಬಿಟ್ಟು, ಅವಿದ್ಯೆಬಿಟ್ಟು, ಮಾಯೆಬಿಟ್ಟು—" ಎಂದು ವೇದಾಂತ ತತ್ವದ 'ಕುರಳ್' ನುಡಿಗಳನ್ನು ಹಾಡಿಕೊಂಡಿದ್ದರು.

ಕಲ್ಯಾಣಿ ಪುಸ್ತಕವನ್ನು ಕೈಯಲ್ಲಿ ಹಿಡಿದು, ತನ್ನ ಗಂಡನ ಸಂಗತಿಯನ್ನೇ ನೆನೆದು ನೆನೆದು ಬೇಗುದಿಗೊಳ್ಳುತ್ತಿದ್ದಳು.

ಸಾಯಂಕಾಲ ಬರುವ ಟಪ್ಪಾಲು ಪೇದೆ ಒಂದು ಕವರನ್ನು ಕೊಟ್ಟು ಹೋದನು. ಅದರ ಮೇಲಿರುವ ಅಕ್ಷರಗಳನ್ನು ಕಾಣುತ್ತಲೇ ಅವಳ ಮುಖದಲ್ಲಿ ಮುಗುಳ್ನಗೆ ಕಂಡಿತು. ಕಳೆದ ಎಂಟು ತಿಂಗಳಿಂದ ಅವನೇನೂ ಕಾಗದ ಬರೆಯದ್ದರಿಂದ ಉಂಟಾದ ಕೋಪವೂ, ಹೇಳದೆ ಹಣವನ್ನು ಕದ್ದುಕೊಂಡೋಡಿದ ವೈಭವವೂ ಎಲ್ಲಾ ಒಂದೇ ಕ್ಷಣದಲ್ಲಿ ಮರೆಯಾಗಿ ಹೋಯಿತು. ಆದರೂ ಯಾರಾದರೂ ನೋಡಿಬಿಟ್ಟಾರೆಂದು ಶಂಕೆಗೊಂಡು, ಕಾಗದವನ್ನು ಮಡಿಲೊಳಗೆ ಮರೆಸಿಕೊಂಡು, "ಒಳ್ಳೆ ವೇಳೆ! ಅಪ್ಪ ಇಲ್ಲದ ಸಮಯ ನೋಡಿ ಬಂತಲ್ಲ, ನಾನು ಓದಿಕೊಂಡು ಹೇಳಿದರೂ ಹೋದೀತು, ಹೇಳದಿದ್ದರೂ ಹೋದೀತು" ಎಂದುಕೊಂಡು, "ಅಜ್ಜೀ! ಹೊರಗಡೆ ಸ್ವಲ್ಪ ನೋಡಿಕೊಳ್ಳಿ. ನಾನು ಮಹಡಿಯ ಮೇಲೆ ಹೋಗುತ್ತೇನೆ" ಎಂದು ಹೇಳಿ ಮಹಡಿಗೆ ನಡೆದಳು.

ಕಾಗದವನ್ನು ಬಿಡಿಸಿ ಓದಲಾರಂಭಿಸಿದಳು; ಹೀಗಿತ್ತು:—

ಷೇಕ್ಸ್‌ಪಿಯರ್ ಹೆಡ್
ಲಂಡನ್

ಕಣ್ಮಣಿ ಕಲ್ಯಾಣಿಗೆ,

ನಾನು ಇಷ್ಟು ದಿವಸ ಕಾಗದ ಬರೆಯದಿದ್ದುದಕ್ಕೆ ಮನ್ನಿಸು. ಏನು ಮಾಡುವುದು? ಆ ಸಮಯದಲ್ಲಿ ಹಾಗೆ ಮಾಡೋಣವೆಂದು ತೋರಿತು. ಹೋದದ್ದು ಹೋಗಲಿ. ನನಗೆ ಸೆಲಕ್ಷನ್ ಆಗಲಿಲ್ಲ. ಆದಷ್ಟು ಬೇಗನೇ ಹಿಂದಿರುಗಲಿಕ್ಕಿದ್ದೇನೆ. ನಿನ್ನ ದೇಹಾರೋಗ್ಯ

ಹೇಗಿದೆ? ತಂದೆ ಅಣ್ಣ ಎಲ್ಲರೂ ನನ್ನನ್ನು ನಿಂದಿಸಿಯಾರು. ನನ್ನಲ್ಲೇ ತಪ್ಪಿರುವಾಗ ಅವರನ್ನು ದೂರಿ ಏನೂ ಪ್ರಯೋಜನವಿಲ್ಲ. ಅದಕ್ಕಾಗಿ ನೀನು ದುಃಖಿಸಬಾರದು. ಅವರನ್ನೇನೂ ವಿರೋಧಿಸಿ ಕೊಳ್ಳಬೇಡ. ನಾನು ಬರುವಾಗ ಎಡಿನ್‌ಬರೋವಿಗೂ, ಇಟಲಿಗೂ ಹೋಗಿಬರಬೇಕೆಂದಿದ್ದೇನೆ. ನಿನ್ನಿಂದಾದರೆ ರೂ. ೩೦೦ ಕಳುಹಿಸಿದರೆ ಒಳ್ಳೆಯದಿತ್ತು. ಇಲ್ಲದಿದ್ದರೆ ಹಿಂದಿರುಗಿ ಬರುವುದೇ ಶ್ರಮವಾಗುತ್ತದೆ. ನೀನು ಈ ಉಪಕಾರವನ್ನು ಮಾಡಲು ಹಿಂಜರಿಯಲಾರೆ ಎಂದೇ ನಂಬಿರುತ್ತೇನೆ. ನನಗೆ ಯಾವಾಗಲೂ ನಿನ್ನ ನೆನಪಾಗಿಯೇ ಇದೆ. ಯಾವಾಗ ನಿನ್ನನ್ನು ಕಂಡೇನೆಂದು ಆತುರಗೊಂಡಿದ್ದೇನೆ. ಹಣ ಕಳುಹಿಸಿದರೆ ಆದಷ್ಟು ಬೇಗನೇ ಬಂದು ಸೇರುವೆನು.

ಇಂತು ನಿನ್ನ ಪ್ರಿಯ,

**ಗೋಪಾಲ.**

ಕಾಗದದ ಮೊದಲ ಮಾತನ್ನು ಓದುತ್ತಿದ್ದಾಗಲೇ ಅವಳ ಹೃದಯವು ಆನಂದದಿಂದ ಅರಳತೊಡಗಿತು. ಪೂರಾ ಓದಿದ ಮೇಲೆ ಪತ್ರವನ್ನು ಹತ್ತುಬಾರಿ ಕಣ್ಣಿಗೆ ಒತ್ತಿಕೊಂಡಳು. ಹಣಕ್ಕೆ ಏನುಮಾಡಬಹುದೆಂದು ಯೋಚನೆಮಾಡಿದಳು. ತಂದೆಯೊಡನೆ ಕೇಳುವುದೆಂಬುದು ಆಗದ ಕೆಲಸ. ಊರಲ್ಲಿರುತ್ತಿದ್ದರೆ ತಾಯಿಯ ಕೈಯಲ್ಲಿ ಹಣವಿರುತ್ತಿತ್ತು. ಮದರಾಸಿಗೆ ಬಂದಮೇಲೆ ತಾಯಿ ಪ್ರತ್ಯೇಕವಾಗಿ ಹಣ ಇಟ್ಟುಕೊಳ್ಳುವುದಿಲ್ಲ. ಏನು ಹೇಗೆ ಎಂದು ಚಿಂತಿಸುತ್ತಾ ಕೆಳಗೆ ಬಂದಳು.

ನಾಗು "ಕ್ರಿಕೆಟ್" ಆಡಿಬಿಟ್ಟು ಆಗತಾನೇ ಮನೆಗೆ ಬಂದನು. ಅವನಿಗೆ ತಿಂಡಿ ಕೊಡಲಿಕ್ಕಾಗಿ, ಅವನನ್ನು ಎರಡನೇ ಕಟ್ಟಿನ ಕೋಣೆಗೆ ಬರುವಂತೆ ಹೇಳಿದಳು. ದೊಡ್ಡ ಪೀಠಿಕೆಯೊಂದಿಗೆ ಆರಂಭಿಸಿ, ಗೋಪಾಲ ಹಣ ಕೇಳಿರುವ ವಿಷಯವನ್ನು ಅವನಿಗೆ ತಿಳಿಯಪಡಿಸಿದಳು.

"ಸರಿ ಬಿಡು. ಹೋದ ಉಪಾಯದಂತೆಯೇ ತಿರುಗಿಬರಲಿ. ಇಲ್ಲದಿದ್ದರೆ ಅಲ್ಲಿಯೇ ಸಂತೇಬೀದೀಲಿ ನಿಲ್ಲಲಿ. ನೀರ್ಗಟ್ಟಿ ಕದ್ದುತಿಂದ ನಾಯಿಗೆ ನೀರ್ಮಜ್ಜಿಗೆ ಗುರುದಕ್ಷಿಣೆಯಂತೆ. ಎರಡು ಸಾವಿರಕ್ಕೆ ಮುನ್ನೂರು ಬೇರೆ

ಕೊಸರು ಕೊಡಬೇಕೆ? ಚೆಂದಾಗಿದೆ. ಈ ಹಾಳುಹರಟೆ ಎಲ್ಲಾ ನನಗೆ ಗೊತ್ತಿಲ್ಲ.''

''ಅಣ್ಣಾ! ನೀನೇ ಹೀಗಂದುಬಿಟ್ಟರೆ ನಾನೇನು ತಾನೇ ಮಾಡಲಿ? ಈ ಒಂದುಬಾರಿ ಮಾತ್ರ ನೀನು ಹೇಗಾದರೂ ಸಹಾಯ ಮಾಡಿಯೇ ತೀರಬೇಕು. ಇಲ್ಲದಿದ್ದರೆ ಬೇರೆ ಯಾರನ್ನು ಕೇಳಲಿ ನಾನು? ನೀನೇ ನನ್ನ ನಿರಾಕರಿಸಿಬಿಟ್ಟರೆ ಹೋದವರು ಹೇಗೆ ತಿರುಗಿಬಂದಾರು?'' ಎಂದು ಕಲ್ಯಾಣಿ ಮುತ್ತುಮುತ್ತಾಗಿ ಕಣ್ಣೀರನ್ನುದುರಿಸಿದಳು.

ಹುಟ್ಟಿನಲ್ಲಿಯೇ ನಾಗರಾಜನು ತಂಗಿಯ ಮೇಲೆ ಕಟ್ಟಕ್ಕರೆ ಇಟ್ಟಿದ್ದ. ಚಿಕ್ಕಂದಿನಿಂದಲೂ ಅವಳು ಅತ್ತರೆ ಅವನು ಸಹಿಸನು. ಅವಳನ್ನಗಲಿ ಅರೆಗಳಿಗೆ ಇರಲಿಕ್ಕೂ ಅವನಿಂದ ಆಗದು. ಅಂತಹ ಸಹೃದಯನಾದ ಸಹೋದರನಿಗೆ ಅವಳ ಕಣ್ಣೀರನ್ನು ಕಂಡಮೇಲೆ ಹೇಗಿದ್ದೀತು? ''ಕಲ್ಯಾಣಿ! ನನ್ನನ್ನು ಏನುಮಾಡೂ ಅನ್ನುತ್ತೀ? ಕೂಡಿದರೆ ಮಾಡಿಯೇನು? ಸಾಲ ತೆಗೀ ಅಂದರೆ ಮಾತ್ರ ನನ್ನಿಂದಾಗದು'' ಎಂದನು.

''ಅಣ್ಣಾ, ನಿನ್ನನ್ನು ನಾನು ಸಾಲ ತಕ್ಕೋ ಅಂದೇನಾ? ನೀನು ಎಲ್ಲಿಂದ ಸಾಲ ತಂದೀ? ನನ್ನ ಹತ್ತು ಪವನಿನ ಚೈನಿದೆ. ಈಗ ಪವನಿಗೆ ಇಪ್ಪತ್ತೆರಡು ರೂಪಾಯಿ. ಮಾರಿಬಿಡುವುದು. ಅದನ್ನುಮಾರಿ ಕಳುಹಿಸಿಬಿಟ್ಟರೆ ಅನಂತರ ಒಳ್ಳೆಕಾಲ ಬಂದಾಗ ಮಾಡಿಸಿಕೊಂಡರಾಯಿತು'' ಎಂದಳು.

''ಒಳ್ಳೆಮಾತು ಹೇಳಿದಿ! ಯಾರು ಮಾಡಿಸಿಹಾಕಿದ್ದು? ಮಾರಲಿಕ್ಕೆ ನಿನಗೇನು ಸ್ವಾತಂತ್ರ್ಯ? ಬಹಳ ಚೆನ್ನಾಗಿದೆ ನಿನ್ನ ಯೋಚನೆ!'' ಎಂದು ನಾಗರಾಜ ಕೋಪದಿಂದ ಅಂದನು.

''ಅಣ್ಣ! ನಾನು ಸಣ್ಣವಳೇ ಆದರೂ ನಾನು ಹೇಳುವುದನ್ನು ಕೇಳಿಕೊಂಡು ಅನಂತರ ಹೇಳು. ನಾನು ತೌರುಮನೆಯಲ್ಲಿಲ್ಲದೆ ಅಲ್ಲೇ ಇದ್ದೇ ಅಂತ ಇಟ್ಟುಕೊ. ಆಗ ಅವರಿಗೆ ಅಗತ್ಯಬಿದ್ದು ಇದನ್ನು ಮಾರಿ ಬಿಟ್ಟರೆ ನೀವು ಏನುಮಾಡುತ್ತೀರಿ? ಎರಡು ದಿನ ಬೈದೀರಿ, ಅಷ್ಟೇತಾನೆ? ಒಳ್ಳೇತನದಲ್ಲಿ ಅವರು ತಿರುಗಿ ಬರಲಿ, ಈ ಎರಡುಸಾವಿರವನ್ನೂ, ನಗಕ್ಕೆ ಬದಲಾಗಿ ನಗವನ್ನೂ ಬಡ್ಡಿಗೆ ಬಡ್ಡಿ ಸೇರಿಸಿ ತಿರುಗಿ ಕೊಟ್ಟುಬಿಡುತ್ತೇನೆ. ಏನೋ ಒಡಹುಟ್ಟಿದವನಾಯಿತಲ್ಲ, ಅಪ್ಪಾ ತುಂಬ ಮುಂಗೋಪಿಗಳಾಗಿ

ದ್ದಾರಲ್ಲ, ಅಂತ ನಿನ್ನನ್ನು ಕೇಳಿದೆ. ನೀನೂ ನಿರಾಕರಿಸಿಬಿಟ್ಟರೆ, ದೇವರು ಬಿಟ್ಟ ದಾರಿ!" ಎಂದು ಅಳಲಾರಂಭಿಸಿಬಿಟ್ಟಳು.

ನಾಗರಾಜನ ಮನಸ್ಸಿನಲ್ಲಿ ದೊಡ್ಡದೊಂದು ಹೋರಾಟಕ್ಕೆ ಆರಂಭ ವಾಯಿತು. ಒಂದೆಡೆ ಕೋಪವಿದ್ದರೂ, ಕಲ್ಯಾಣಿಯ ದೀನಭಾವವನ್ನು ನೆನೆದು "ಹೋದರೆ ಹೋಗಲಿ, ಕಳುಹಿಸಿಬಿಡುವ" ಎಂದು ತೋರಿತು. ತಂದೆಯನ್ನು ವಂಚಿಸಲಾಗದೆಂದು ಮನಸ್ಸಾಕ್ಷಿ ಒಂದೆಡೆ ಹೇಳುತ್ತಿರಲು, ಅನಾಥ ಸಹೋದರಿಯ ಮೇಲಣ ವಾಂಛೆ ಒಂದೆಡೆ ಎಳೆಯಲು, ಕಡೆಗೆ ಗಟ್ಟಿಮಾಡಿ, ಆ ನಗವನ್ನು ಮಾರಿ ಹಣವನ್ನು ಕಳುಹಿಸುವುದಾಗಿ ಒಪ್ಪಿ ಕೊಂಡನು. ಆದರೂ ಕಲ್ಯಾಣಿಯನ್ನು ಕುರಿತು, "ನಗ ಎಲ್ಲಿ? ಎಂತ ಕೇಳಿದರೆ ಏನುಹೇಳುತ್ತಿ?" ಎಂದು ಕೇಳಿದನು.

"ಆ ವಿಷಯ ನಾನು ನೋಡಿಕೊಂಡೇನು. ಇದೊಂದು ಉಪಕಾರ ಮಾಡು" ಎಂದು ಪ್ರಾರ್ಥಿಸಿಕೊಂಡಳು.

"ಕಲ್ಯಾಣಿ, ಈಗ ನಾನು ಮಾಡುವ ಕೆಲಸ ಅಪ್ಪನಿಗೆ ತಿಳಿದು ಹೋದರೆ, ನನ್ನನ್ನು ಮನೆಯಿಂದಲೇ ಅಟ್ಟಿಬಿಟ್ಟಾರು. ಇದು ಗೊತ್ತಿದ್ದೂ. ಮೋಸಕ್ಕೆ ಒಡಂಬಡ ಬೇಕಾಯಿತು" ಎಂದನು ನಾಗು.

# ಅಳಿಯನ ನಡತೆ

"ಕಲ್ಯಾಣಿ! ನಾನು ಬೇಡಾಂತ ಹೇಳಿದರೂ ನೀನು ಕಣ್ಣೀರುಬಿಟ್ಟು ಕೆಲಸ ಸಾಧಿಸಿಕೊಂಡುಬಿಟ್ಟೆ. ಈಗ ಇದಕ್ಕೇನು ಹೇಳುತ್ತೆ? ನಾನು ಕಣ್ಣಾರೆ ಕಂಡಾಗಿದೆ. ಮೆಜಸ್ಟಿಕ್ ಹೋಟಲ್ಲಿನ ಮೇಲುಪ್ಪರಿಗೆಯ ಮೇಲೆ ಮಿಸ್ಟರ್ ವಿ. ಜಿ. ಪಾಲ್ ದೊರೆಯವರು, ಗಂಧರ್ವ ಸ್ತ್ರೀಸಹಿತರಾಗಿ ದಯಮಾಡಿಸಿರುತ್ತಾರೆ. ಕಾಣಲಿಕ್ಕೆ ಹತ್ತುಸಾವಿರ ಕಣ್ಣುಬೇಕು. ಈ ಮದರಾಸಿಗೇ ಅದೂ ನಾವಿರುವ ಸ್ಥಳಕ್ಕೆ ಸಮೀಪವಾಗಿಯೇ ಬಂದಿದ್ದಾನಲ್ಲಾ! ಏನು ಧೈರ್ಯ! ಅಯೋಗ್ಯ! ರ್‍ಯಾಸ್ಕಲ್! ಅವನನ್ನು ನಂಬಿ ಹಣವನ್ನು ಕೊಟ್ಟು ಹಾಳಾದೆವಲ್ಲ! ಹೋಗು ದಡ್ಡಿ! ನಿನ್ನಂಥ ಮೂಢ ಹುಡುಗಿ ಇಡೀ ಇಂಡ್ಯಾ ದೇಶದಲ್ಲೇ ಹುಡುಕಿದರೂ ಸಿಕ್ಕಲಿಕ್ಕಿಲ್ಲ. ನಮ್ಮ ಪೂರ್ವಕರ್ಮ! ಇಂಥಾ ಒಬ್ಬ ಅಪೂರ್ವ ಚಿಂತಾಮಣಿ ಸಿಕ್ಕಿದನಲ್ಲ!" ಎಂದು ನಾಗರಾಜನು ತಲೆ ಹೊಡೆದುಕೊಂಡನು.

ಕಲ್ಯಾಣಿಗೆ ಗಂಟಲು ಕಟ್ಟಿಕೊಂಡಿತು. "ನೀನು ಅವರನ್ನು ಹೋಗಿ ನೋಡಬಾರದೆ ಅಣ್ಣಾ?" ಎಂದು ಕಷ್ಟದಿಂದ ಕೇಳಿದಳು.

"ತುಂಬ ಚೆಂದಾಗಿದೆ. ನಾನು ಎಷ್ಟು ಹೇಳಿದರೂ ಕೇಳದೆ ಕುತ್ತಿಗೆಗೆ ನೇಣುಹಾಕಿಕೊಂಡು ಚೈನು ಮಾರೂ ಅಂದಿ. ಹಣ ಪಡೆದು ಕೊಂಡದ್ದಕ್ಕೆ ಒಂದು ಚೂರು ರಶೀದಿಯ ಹೊರತು ಒಂದು ಪಙ್ತಿ ಕಾಗದ ಬರೆದನಾ ಕೃತಘ್ನ? ನಾನು ಈಗೆರಡು ತಿಂಗಳಿಂದ ಕಾಗದ ಇಂದು ಬಂದೀತು ನಾಳೆ ಬಂದೀತು ಎಂದು ತಾಳಿ ತಾಳಿ ನೋಡಿದೆ. ಕಾಗದ ಬಂತೇ ಬಂತೇ ಎಂತ ಕೇಳೀ ಕೇಳಿ ಬಾಯಿಯೂ ನೋವಾಯಿತು. ಅಷ್ಟರೊಳಗೆ ದೊರೆಯವರೇ ಚಿತ್ತೈಸಿಯಾಯಿತು. ನಾನು ಕೇಳುವುದಕ್ಕೆಲ್ಲ ಏನಾದರೂ ಕಾರಣ ಗೀರಣ ಹೇಳುತ್ತೀಯೇ ಹೊರತು, ನೀನೇನು ನೆನೆದು ಕೊಂಡಿರುವೆಯೋ ದೇವರಿಗೇ ಗೊತ್ತು. ಒಂದೊಂದು ದಿನವೂ "ಚೈನೆಲ್ಲಿ?" ಎಂದು ತಂದೆ ಎಲ್ಲಿ ಕೇಳುವರೋ ಎಂದು ಭಯವಾಗಿದೆ. ಎಷ್ಟು ದಿನ ಈ ಕಪಟನಾಟಕ? ನಿನಗಿರುವ ದುಃಖದಲ್ಲಿ ನೀನು ಚೈನು ಹಾಕಿಕೊಳ್ಳುವು

ದಿಲ್ಲವೆಂತ, ಅಮ್ಮನೂ ಅಪ್ಪನೂ ತಿಳಿದುಕೊಂಡಿದ್ದಾರು. ಥಕ್ಕನೆ ಒಂದಿನ ಕೇಳಿಬಿಟ್ಟರೆ ಏನು ಮಾಡುತ್ತೀ?"

"ಏನೋ! ಆದದ್ದು ಆಗಿಯೇ ಹೋಗುತ್ತೆ. ತಲೆಯ ಮೇಲೆ ಹರಿದು ಹೋಗುವ ನೀರು ಗೇಣು ಹೋದರೇನು? ಮೊಳ ಹೋದರೇನು?.... ಅಣ್ಣಾ! ಯಾವುದಕ್ಕೂ ನನ್ನನ್ನು ಅಲ್ಲಿಗೆ ಕರಕೊಂಡುಹೋಗಿ ಕಾಣಿಸು! ಪ್ರತ್ಯಕ್ಷ ನೋಡಿ ಕೇಳಿಬಿಡುತ್ತೇನೆ.

"ನಿನ್ನನ್ನು ಕರಕೊಂಡುಹೋಗುವುದು ಸುಲಭವೇ ತಂಗಿ? ಅಪ್ಪ ಮೊದಲಾದವರೊಪನೆ ಈ ವಿಷಯವನ್ನು ಹೇಳಿ, ಕೇಳಿದರೆ ಕಳುಹಿಸಿಯಾರೆ? ಏನೋ ಮಕ್ಕಳಾಟವಾಗಿ ಮಾತಾಡುತ್ತೀಯಲ್ಲ......"

ಕಟ್ಟಕಡೆಗೆ ನಾಗರಾಜನು ಕಲ್ಯಾಣಿಯ ಬೇಡಿಕೆಗೆ ಒಪ್ಪಿಯೇ ತೀರಬೇಕಾಯಿತು. ಅಂದು ಸಂಜೆ ಅವರಿಬ್ಬರೂ ಸಿನಿಮಾಕ್ಕೆ ಹೋಗುವೆ ವೆಂದು ಹೇಳಿ ಹೊರಟರು.

* * *

"ನೀವು ಯಾರು? ಅವರ ಮಿತ್ರರೋ? ನೆಂಟರೊ?" ಎಂದು ಕೇಳಿದಳು ಆ ದೊರೆಸಾನಿದೇವಿ.

"ನಾನು ಅವನ ಮೈದುನ. ಇವಳು ಅವನ ಹೆಂಡತಿ" ಎಂದನು ನಾಗರಾಜ.

"ಹೆಂಡತಿಯಾ?" ಎಂದು ಆಶ್ಚರ್ಯಪಟ್ಟಳು. "ಹಾಗಾದರೆ ಅವರಿಗೆ ಈ ಮೊದಲೇ ಮದುವೆಯಾಗಿತ್ತೇ?" ಎಂದು ದಿಗಿಲುಬಿದ್ದು ಕೇಳಿದಳು.

"ಹೌದು. ಮದುವೆಯಾಗಿ ಆರು ವರುಷವಾಯಿತು. ನಮ್ಮ ಹಣದ ಸಹಾಯದಿಂದಲೇ ವಿಲಾಯ್ತಿಗೆ ಹೋದ. ಮತ್ತೆ ಹಿಂದಿರುಗಿ ಬರಲಿಕ್ಕೂ ನಾನೇ ರೂಪಾಯಿ ಕಳಿಸಿದೆ."

"ಅವರ ತಮ್ಮ ಕಳಿಸಿದ್ದಲ್ಲವೊ? ನಿಮ್ಮ ಹೆಸರೇನು?"

"ನಾಗರಾಜ್, ಅವನು ಯಾವಾಗ ಬಂದಾನು?"

"ಈಗಲೇ ಬಂದಾರು" ಎಂದಂದು, "ಹಾಗೊ? ಸರಿ ಸರಿ! ತುಂಬ ಚೆಂದ! ಒಂದು ಕೈ ನೋಡಿಯೇ ಬಿಡುವೆ!" ಎಂದು ಬುಸುಬುಸು ಗುಟ್ಟುತ್ತ ಅತ್ತಿತ್ತ ನಡೆದಾಡಲಾರಂಭಿಸಿದಳು.

'ಠಕ್ಕ್ ಠಕ್ಕ್' ಎಂದು ಬೂಟ್ಸಿನ ಸದ್ದು ಕೇಳಿದ ಮರುನಿಮಿಷವೇ ಗೋಪಾಲನು ಕಾಣಿಸಿದ. ಅವನನ್ನು ಕಾಣುತ್ತಲೇ ಬಿಕ್ಕಿ ಬಿಕ್ಕಿ ಅಳಲಿಕ್ಕೇ ತೊಡಗಿಬಿಟ್ಟಳು ಕಲ್ಯಾಣಿ. ಅವನು ಬೆಪ್ಪುನಗೆಯೊಡನೆ "ಇಲ್ಲಿಗೆ ಯಾಕೆ ಬಂದಿ?" ಎಂದು ಕೇಳಿ ಏನೋ ಕತೆ ಹೇಳಲಿಕ್ಕೆ ತೊಡಗಿದನು.

"ಸಾಕು! ನಿಲ್ಲಿಸು! ನಿನ್ನ ಯೋಗ್ಯತೆಯೆಲ್ಲಾ ಗೊತ್ತು ನನಗೆ! ಛೀ ಅಯೋಗ್ಯ!" ಎಂದನು ನಾಗರಾಜ.

ಇಷ್ಟರಲ್ಲಿ ಆ ದೊರೆಸಾನಿ "ಇವಳು ನಿಮ್ಮ ಹೆಂಡತಿಯೊ?" ಎಂದು ಕೇಳಿದುದಕ್ಕೆ ಅವನು ಬಾಯೇ ಬಿಡಲಿಲ್ಲ. ಇವರು ಇಷ್ಟು ಸಾಹಸಮಾಡಿ ಇಲ್ಲಿಗೆ ಬಂದಾರೆಂದು ಅವನು ನೆನೆಯಲೇ ಇಲ್ಲ.

* * *

ಕಲ್ಯಾಣಿಯೂ ನಾಗರಾಜನೂ ಇದಿರಿನಲ್ಲಿಯೇ ಇದ್ದ ಬೀದೀ ಬದಿಯ ಪ್ಲಾಟ್‌ಫಾರಂದಲ್ಲಿ ನಿಂತುಕೊಂಡು, ಅವನ ಆ ಕೋಣೆಯ ಕಡೆಗೇ ಸ್ವಲ್ಪಹೊತ್ತು ನೋಡಿದರು. ಆ ದೊರೆಸಾನಿ ತನ್ನ ಪೆಟ್ಟಿಗೆ, ಹಾಸಿಗೆ ಸಾಮಾನುಗಳೊಂದಿಗೆ ಅವಸರವಸರವಾಗಿ ಒಂದು ಟ್ಯಾಕ್ಸಿಯನ್ನೇರಿ ಹೊರಟುಹೋದಳು.

ಇಷ್ಟರಲ್ಲಿ ನಾಗರಾಜ—"ಇನ್ನಿಲ್ಲೇನು ಕೆಲಸ? ಮಡ್ಡಿಲ್ಲದಾಗ ತಾನೇ ಬರುತ್ತಾನೆ. ಕಡಲಕರೆಗೆ ಹೋಗಿ ಹಾಗೇ ಮನೆಗೆ ಹೋಗೋಣ" ಎಂದು ಒಂದು ರಿಕ್ಷಾ ಮಾತಾಡಿಕೊಂಡು ನೆಟ್ಟಗೆ ಟ್ರಿಪ್ಲಿಕೇನ್ ದಾರಿಯಾಗಿ ಮೈಲಾಪುರದ ಕಡಲಕರೆಯನ್ನು ಸೇರಿದರು.

ಅಲ್ಲಿ ಗುಂಪು ಕಡಮೆಯಾಗಿರುವ ಎಡೆಯನ್ನು ಹುಡುಕಿ ಕುಳಿತರು. ಅದುವರೆಗೂ ಕಟ್ಟಿಟ್ಟುಕೊಂಡಿದ್ದ ಕಲ್ಯಾಣಿಯ ದುಃಖವು ಕಟ್ಟೊಡೆದ ಏರಿಯಂತೆ ಮೀರಿ ಉಕ್ಕಿತು.

"ಅಣ್ಣಾ! ಇನ್ನೇನು ಮಾಡಲಣ್ಣಾ!" ಎಂದು ಅಳಲಾರಂಭಿಸಿದಳು.

ಅವಳನ್ನು ಸಮಾಧಾನ ಮಾಡಬೇಕಾದರೆ ಅವನಿಗೆ ಸಾಕುಸಾಕಾಗಿ ಹೋಯಿತು. ತಂಗಿಯ ಕಣ್ಣೀರನ್ನು ನೋಡಿ ನೋಡಿ, ಅವನ ಮನಸ್ಸು ಬೆಂಕಿ ತಾಗಿದ ಮೇಣದಂತೆ ಕರಗಿಹೋಯಿತು.

ಇಬ್ಬರೂ ಸ್ವಲ್ಪಹೊತ್ತು ಮಾತೇ ಆಡಲಿಲ್ಲ. ತೆರೆಗಳ ಪೆರ್ದನಿಯ ಹೊರತು ಮತ್ತೇನೂ ಕೇಳಿಸಲಿಲ್ಲ.

"ಕಲ್ಯಾಣಿ! ಸುಮ್ಮನಿರೇ! 'ಕೈಗೆ ಬಾರದ ಕತ್ತೀನ ಅದರ ಕಾಲ್ನಡೆಗೇ ಬಿಟ್ಟು ತಿರುಗಿಸು' ಎಂಬಹಾಗೆ ಬಾರದ್ದೆ ಎಲ್ಲಿಗೆ ಹೋದಾನು? ಕೆಟ್ಟು ಸುತ್ತಿ ನಾಲ್ಕು ದಿನದಲ್ಲಿ ಬಂದು ನಿಲ್ಲುತ್ತಾನೆ, ನೋಡು. ಇದಕ್ಕಾಗಿ ನೀನು ಇಷ್ಟು ಅಳಬಹುದೆ? ಕಲ್ಯಾಣಿ, ನೀನಳುವುದನ್ನು ನೋಡಿ ಗಂಡ ಸಾಗಿಯೂ ನನಗೆ ಸೈಸಲಿಕ್ಕಾಗುವುದಿಲ್ಲವಲ್ಲಾ! ಅಮ್ಮ ನೋಡಿದರೆ ಏನಾದೀತು? ನಿನ್ನ ಅಭಿಮಾನವನ್ನೆಲ್ಲಾ ಅಯೋಗ್ಯ–ಅಪಾತ್ರ–ಅವನಿಗೇ ಕೊಟ್ಟುಬಿಟ್ಟೆಯಲ್ಲ! ಹೋಗಲಿ ಹಾಳಾಗಿ! ನಿನ್ನ ಪ್ರೇಮವನ್ನು ಪಡೆಯಲು ಅರ್ಹತೆಯಿಲ್ಲದವನು! ಅಂಥವನನ್ನು ದೇವರು ನಿನಗೆ ಗಂಡನಾಗಿ ಮಾಡಿದನಲ್ಲ!......"

ಹೀಗೆ ನಾಗರಾಜನು ಅವನನ್ನು ಬಯ್ಯಲು ತೊಡಗಿದಂತೆ ಕಲ್ಯಾಣಿಯ ಶೋಕ ಹೆಚ್ಚೇ ಆಯಿತು. ಅದರಿಂದ ಸಹನೆಮೀರಿ ಅವನೂ ಅಳತೊಡಗಿದ.

ಸ್ವಲ್ಪಹೊತ್ತು ಅತ್ತು ಅಳುವಿನ ಧಾರೆ ತಗ್ಗಿದ ಮೇಲೆ—"ಮನೆಗೆ ಹೋದರೂ ಹೀಗೆಯೇ ಅಳುವಿಯಾ? ಯಾಕೆ ಅಳುತ್ತಿ? ಎಂದು ಕೇಳಿದರೆ ಏನು ಹೇಳುತ್ತಿ?" ಎಂದನು.

ಆಗ ಕಲ್ಯಾಣಿಗೆ ಪಳಕ್ಕನೆ ಒಂದು ಯೋಚನೆ ಹೊಳೆಯಿತು. "ಸಿನಿಮಾದಲ್ಲಿ ನನ್ನ ಚೈನು ಕಾಣೆಯಾಗಿ ಹೋಯಿತೆಂದು ಹೇಳಿಬಿಡುತ್ತೇನೆ. ಒಂದು ಸುಳ್ಳನ್ನು ಮರೆಸಲಿಕ್ಕೆ ಒಂಬತ್ತು ಸುಳ್ಳು. ಅದಕ್ಕಾಗಿಯೇ ಅಳುವೆನೆಂದು ತಿಳಿದುಕೊಳ್ಳುತ್ತಾರೆ" ಎಂದಳು.

# ಕಲ್ಯಾಣಿಯ ಕಾಣೆ

"ಏನೂಂದ್ರೆ? ನೀವು ಗಮನಿಸಿದ್ದೀರಾ? ಬರುಬರುತ್ತಾ ಕಲ್ಯಾಣಿ ಕೊಂಚ ತಿಳಿಯಾದಹಾಗೆ ಕಾಣುತ್ತೇ. ಒಂದು ವೇಳೆ ನಮಗೆ ಗೊತ್ತಿಲ್ಲದೆ ಅವಳಿಗೇನಾದರೂ ವರ್ತಮಾನ ಬಂದಿದ್ದೀತು. ನಿಮಗೇನು ಕಾಣು ತ್ತದೆ?" ಎಂದು ಲಕ್ಷ್ಮಮ್ಮ ಕೇಳಿದಳು.

"ಉಸ್. ಮೆಲ್ಲಗೆ ಮಾತಾಡು. ಚೈನಿನ ವಿಷಯವಾಗಿ ನಾನೇ ನಾದರೂ ಗಡಿಬಿಡಿ ಮಾಡಿಯೇನೆಂದು ಅಂದುಕೊಂಡಿದ್ದಾಳು. ನಾನು ಬಾಯೇ ಬಿಡಲಿಲ್ಲವಲ್ಲಾ. ಕೋಪಿಸಿ ಬೈದೂ ಏನು ಲಾಭ? ತನಗೇ ಗಟ್ಟಿಗತನವಿಲ್ಲದ ಮಕ್ಕಳಿಗೆ ಹೇಳಿಕೊಟ್ಟು ಬಂದೀತಾ? ಅಲ್ಲದೆ ಮೊದಲು ಸಿನಿಮಾಕ್ಕೆ ಕಳುಹಿಸಿದ್ದೇ ತಪ್ಪು. ಸಾವಿರ ಸಾವಿರ ಎತ್ತಿಕೊಡಲಿಲ್ಲವೋ ಅವಳು? ಕೇಳಿದಕೂಡಲೇ ಉದುರಿಸಿ ಬಿಡೋಣವೆಂದು ತೋರಿತು. ವಯಸ್ಸು ಬಂದ ಹುಡುಗಿ. ದಿಢುಂ ಎಂದು ಆ ಮೂರ್ಖ ಇದಿರು ಬಂದು ನಿಲ್ಲುತ್ತಲೇ ರಸಾಭಾಸವಾಗಿಹೋಗುತ್ತದೆಂದು ಎಷ್ಟೋ ತಡೆದುಕೊಂಡು ಹೋಗಬೇಕಾಗಿದೆ."

"ನಿನ್ನೆ ಏನೋ ಮಾತಾಡಿಕೊಂಡಿದ್ದಾಗ "ಪವನಿಗೆ ಅಪಾರ ಬೆಲೆ ಏರಿಹೋಗುತ್ತಿದೆ. ನಿನ್ನ ಉಡ್ಯಾಣವನ್ನು ಕಳಚಿ ಸುಂದರಿಗೆ ಕೊಟ್ಟುಬಿಡು. ಅಗ್ಗವಾದಾಗ ನಿನಗೆ ಮಾಡಿಸುತ್ತೇನೆ ಅಂದೆ. 'ನಾನು ಪೆಟ್ಟಿಗೇಲಿಡೋದ ರಿಂದ ತಾನೇ ಹೇಳ್ತೀರಿ? ಇನ್ನುಮೇಲೆ ಬಚ್ಚಿಡುವುದೇ ಇಲ್ಲ' ಎಂತ ಕೋಪದಿಂದ ಎಲ್ಲಾ ನಗಗಳನ್ನೂ ಹಾಕಿಕೊಂಡು ಬಿಟ್ಟಳು. ಆಮೇಲೆ ನಾನೂ ಏನೂ ಹೇಳಲಿಲ್ಲ. ಹೇಗಾದರೂ ಕಣ್ಣುವೊರೆಸಿಕೊಂಡಿರದಿದ್ದರೆ ಸಾಕಾಗಿದೆ. ಒಂದುವೇಳೆ ನಿಮಗೇನಾದರೂ ಗೊತ್ತಿದ್ದು, ನನಗೆ ಹೇಳ ಬಾರದೂ ಅಂತ ಮಾಡಿದ್ದೀರೋ ಏನೊ?"

"ನನಗೆ ಏನೂ ಒಂದೂ ಸುಳಿವು ಸಿಕ್ಕಲಿಲ್ಲ. ಸೀಮೇಗೆ ಹೋದನೋ? ಇಲ್ಲವೊ? ಬಂದಾನೊ? ಬಂದಿದ್ದಾನೊ? ಒಂದೂ ನನಗೆ ಗೊತ್ತಿಲ್ಲ. ಬಾರದೆ ಏನುತಾನೇ ಮಾಡಿಯಾನು? ನಾಳೆಗೇ ಹಣ ಬೇಕಾಗಿದ್ದರೆ

ನಾಚಿಕೆಯಿಲ್ಲದೆ ಬಂದಾನು. ಮತ್ತೆ ಅವಳನ್ನೇ ಕೆದರಿಯಾನು? ಅವಳೂ ಏನಾದರೂ 'ಕೊರವೀಸಾಸ' ಮಾಡ್ಯಾಳು. ಹುಟ್ಟಿಕೊಳ್ಳುವಾಗಲೇ ಕೊಂಕುಬುದ್ಧಿಯೂ ಬಂದುಬಿಡುತ್ತೆ. ಅದೇ ಆಶ್ಚರ್ಯ!"

"ಆಹ! ನಿಮಗೆ ಯಾವಾಗಲೂ ಮಗಳ ಮೇಲೆ ಕೊರತೆ ಹೇಳುವುದೇ ಅಭ್ಯಾಸ!"

"ಆ ಸಾಹಸವೆಲ್ಲಾ ನಿನ್ನ ಕವಲಿನಿಂದಲೇ ಬಂದದ್ದು. ಪನಂಗುಡಿಯವರ ಐಶ್ವರ್ಯದ ವ್ಯೆನು. ನನಗೆ ಅದೆಲ್ಲ ಹೇಗೆ ಗೊತ್ತು?"

"ಸರಿ! ಸರಿ! ಸಾಕು! ಸಾಕು!"

* * *

ನಡು ನಿಶಿ. ನಾಗರಾಜನು ಏನೋ ದುಃಸ್ವಪ್ನದಿಂದ ಅಂಜಿ ದಿಡುಕ್ಕೆಂದೆದ್ದು "ಅಪ್ಪಾ! ಅಪ್ಪಾ!" ಎಂದು ಕೂಗಿದನು. ಶಾಸ್ತ್ರಿಯವರು ಹೆದರಿ ಹೋಗಿ, "ಏನೋ ಅದು? ನಾಗು ನಾಗು!" ಎಂದು ಕರೆಯುತ್ತಾ ಎದ್ದು ಬಂದರು. ಲಕ್ಷ್ಮಮ್ಮನೂ ಬಂದಳು. "ಅಪ್ಪಾ! ಕೆಟ್ಟ ಕನಸು! ಅದರಿಂದಲೇ ಕೂಗಿದೆ! ಯಾವುದೋ ಪಿಶಾಚಿ ಬಂದು ಎದೆ ಮೇಲೆ ದೊಡ್ಡ ಕಲ್ಲನ್ನಿಟ್ಟು ಅದರ ಮೇಲೆ ಹತ್ತಿ ನಿಂತಹಾಗಿತ್ತು" ಎಂದು ನಾಚಿಕೆಯಿಂದಂದನು.

"ಸರಿ, ಹೆದರಬೇಡೊ. ಏನೋ ಯೋಚಿಸುತ್ತಾ ಮಲಗಿದ್ದೀ. ಅಜೀರ್ಣದಿಂದಲೂ ಇದ್ದೀತು. ಎದ್ದು ಬಾಗಿಲೆಲ್ಲಾ ತಾಳಹಾಕಿದೆಯೋ ನೋಡಿಬಂದು ಮಲಗೊ."

ಅರೆನಿದ್ರೆ–ಅರೆಎಚ್ಚರದಲ್ಲಿದ್ದ ಶೇಷಜ್ಜಿ "ಏನೋ ಅದೂ ಅಪ್ಪಾ?" ಎಂದರು. ಇಷ್ಟರೊಳಗೆ ಹೊರಬಾಗಿಲಬದಿಗೆ ಹೋಗಿದ್ದ ನಾಗು "ಬಾಗಿಲು ತೆರೆದಿದೆಯಲ್ಲಾ? ರಾತ್ರಿ ತಾಳ ಹಾಕಿಲ್ಲವ?" ಎಂದು ಕೇಳಿದನು.

"ನಾನೇ ತಾಳ ಹಾಕಿದ್ದೆ. ಎಲ್ಲಾ ಸರಿಯಾಗಿದೆಯೋ ನೋಡು. ಮಕ್ಕಳೆಲ್ಲಾ ಮಲಗಿಕೊಂಡಿದ್ದಾವಾ? ಅಡಿಗೇಮನೆಯ ಕಡೆಗೆ ಹೋಗಿ ನೋಡುವಾ" ಎಂದು ಕೈಯಲ್ಲಿ ಬೆತ್ತದೊಂದಿಗೆ ಎದ್ದು ನಡೆದರು ಶಾಸ್ತ್ರಿಗಳು.

"ಹಿಂದಿನ ಬಾಗಿಲು ಭದ್ರವಾಗಿಯೇ ಇದೆ" ಎಂದು ಲಕ್ಷ್ಮಮ್ಮ ಹೇಳುತ್ತಿರುವಾಗ, "ಕಲ್ಯಾಣಿ ಹಾಸಿಗೆಯಲ್ಲಿ ಇಲ್ಲವಲ್ಲ!" ಎಂದನು ನಾಗರಾಜ.

"ಕಾಲು ಗೀಲು ತೊಳೆಯಲಿಕ್ಕೆ ಹೋದಳೋ ಏನೋ!"

"ಇಲ್ಲ! ಇಲ್ಲ! ಎಲ್ಲಿಯೂ ಇಲ್ಲ!"

"ಏನಿದು ಅನರ್ಥ! ಎಲ್ಲಿಗೆ ಹೋಗಿದ್ದಾಳು? ರಾತ್ರಿ ಮಲಗುವಾಗ ಕೂಡ ನಿತ್ಯದಂತೆಯೇ ಇದ್ದಳು. ಎಲ್ಲಿಯಾದರೂ ಕೆರೆ ಬಾವಿಗೆ! ಅಯ್ಯೋ! ಏನು ತೋರಿತೋ! ಏನು ಕರ್ಮವೋ! ಇದೆಂಥ ಕಷ್ಟಕಾಲ ಬಂತಮ್ಮಾ! ಸಿಡಿಲಮೇಲೆ ಸಿಡಿಲಾಗಿ ಬೀಳುತ್ತದಲ್ಲ!" ಎಂದು ಲಕ್ಷ್ಮಮ್ಮ ರೋದನ ಮಾಡತೊಡಗಿಬಿಟ್ಟಳು.

"ಅಪ್ಪಾ, ಎಲೋ ಅಪ್ಪಾ! ಗಡಿಬಿಡಿ ಮಾಡಬೇಡವೋ. ಬೆಳಗಾಗಲೀ. ನೆರೆಕರೆಯಲ್ಲಿ ವಿಚಾರಿಸುವಾ. ದೇವೀ! ಅಂಬಿಕೇ! ಜಗದೀಶ್ವರೀ! ಈ ರಾತ್ರಿ ಹೇಗೆ ಬೆಳಗಾಗಬೇಕಾ? ಹೆಣ್ಣುಜನ್ಮವೋ! ಹುಣ್ಣುಜನ್ಮವೋ! ನಾನು ಮಹಾಪಾಪಿ! ಎಂತೆಂತಾ ಕಷ್ಟಗಳನ್ನು ನೋಡಲಿಕ್ಕಾಗಿ ಹೀಗೆ ಜಾಂಬವಂತಳಾಗಿದ್ದೇನೋ! ಅಮ್ಮಾ! ಲಕ್ಷ್ಮೀ! ಅಳಬೇಡವೇ. ಅತ್ತು ಏನುಮಾಡಲಾಗುತ್ತದೆ? ಯಾವ ದಿನ ಆ ಮಹಾಪಾಪಿಯನ್ನು ಹುಡುಕಿ ಹಿಡಿದುಕೊಟ್ಟೆವೋ ಅಂದಿನಿಂದ ಅದಕ್ಕೂ ಸುಖವಿಲ್ಲ, ನಮಗೂ ಸುಖವಿಲ್ಲ. ನನ್ನಮ್ಮಾ! ಕಲ್ಯಾಣೀ! ಕಲ್ಯಾಣೀ! ನಿನ್ನನ್ನು ಬೆಳೆಸಿದ ನಮ್ಮ ಕೊಂಡಾಟವೇನಮ್ಮಾ! ಬುದ್ಧಿಶಾಲಿಯಾದ ನಿನಗೆ ಹೀಗೂ ಒಂದು ದುರ್ಬುದ್ಧಿ ಬರಬೇಕಾ? ಅಯ್ಯೋ!" ಎಂದು ಅತ್ತರು ಶೇಷಜ್ಜಿ.

"ಅವಳ ಪೆಟ್ಟಿಗೆ ಉಂಟಾ ನೋಡು. ಅವಳಾಗಿಯೇ ಹೋದಳೋ, ಅಲ್ಲ ಬಲವಂತವಾಗಿ ಕಳಿಸಲ್ಪಟ್ಟಳೋ? ನೋಡೋ ನೋಡೋ" ಎಂದರು ಶಾಸ್ತ್ರಿಗಳು.

"ಏನೋ ಅಪ್ಪಾ, ನಿನ್ನೊಡನೆ ಏನಾದರೂ ಹೇಳಿದಳೆ? ಮೊದಲಿನ ಹಾಗೆ ಇದ್ದವಳಾದರೆ ಜೀವದಮೇಲೆ ಬೇಸತ್ತು ಏನಾದರೂ ಮಾಡಿಕೊಂಡಳೋ ಅಂತ ನೆನೆಸಬಹುದಿತ್ತು. ಈಗೆಲ್ಲಾ ನಗುತ್ತಾ ಕಲೆಯುತ್ತಾ ಸಹಜವಾಗಿಯೇ ಇದ್ದಳಲ್ಲಪ್ಪಾ!" ಎಂದರು ಶೇಷಜ್ಜಿ.

"ಇರುವವರೆಗೆ ಸಂತೋಷವಾಗಿಯೇ ಇದ್ದರೆ ಸುಲಭವಾಗಿ ಮೋಸ ಮಾಡಿಬಿಡಬಹುದು, ಅಂತ ಯೋಚನೆಮಾಡಿ ಹೀಗೆ ಮಾಡಿದ್ದಾಳೋ ಏನೊ" ಎಂದು ಶಾಸ್ತ್ರಿಗಳು ದುಃಖಧ್ವನಿಯಿಂದಂದರು.

"ಷೆಟ್ಟಿಗೆ ತೆರೆದುಕೊಂಡಿದೆ. ಸಾಮಾನುಗಳು ಏನೂ ಇಲ್ಲ. ಬೀರುವಿನಿಂದ ಕೆಲವು ಪುಸ್ತಕಗಳೂ ತೆಗೆಯಲ್ಪಟ್ಟಿವೆ. ಈ ಉಂಗುರ ಮಾತ್ರ ಕೆಳಗೆ ಬಿದ್ದಿತ್ತು" ಎಂದು ಕೈಯಲ್ಲೊಂದು ಉಂಗುರವನ್ನು ಹಿಡಿದುಕೊಂಡು ನಾಗು ಬಂದನು.

"ಸರಿ, ಪರಿಸ್ಥಿತಿ ನೋಡಿದರೆ ತಾನಾಗಿಯೇ ಹೋದಹಾಗೆ ಕಾಣುತ್ತದೆ. ಏನು ಮಾಡುವುದು? ಕಷ್ಟಕಾಲವು ಹಿಡಿದು ಆಡಿಸುತ್ತಿವೆ" ಎಂದು ಕಲ್ಲಾಗಿ, ಕುಳಿತುಬಿಟ್ಟರು ಶಾಸ್ತ್ರಿಗಳು.

ಬೆಳಗಾಯಿತು. ಎಲ್ಲರೂ ಏನು ಏನೊ ಮಾತಾಡಿಕೊಳ್ಳುತ್ತಾ ಇದ್ದರೇ ಹೊರತು, ಒಂದು ಕೆಲಸವನ್ನೂ ಮಾಡಲಿಲ್ಲ. ಮಕ್ಕಳು "ಹಸಿವೆ ಹಸಿವೆ" ಎಂದು ಕೂಗಿದುವು. ಲಕ್ಷ್ಮಮ್ಮ ಏನುಮಾಡುವುದೆಂದು ತೋರದೆ, ಗಾಳಿಗೆ ಸಿಕ್ಕಿದ ಹುಲ್ಲುಕಡ್ಡಿಯಂತೆ ನಡುಗುತ್ತಿದ್ದಳು. ಶಾಸ್ತ್ರಿಗಳು ಒಳಗೂ ಹೊರಗೂ ಸುಮ್ಮನೆ ನಡೆದಾಡುತ್ತಿದ್ದರು. ಆಗ ಶೇಷಜ್ಜಿ ಎಡವಿತಡವಿಕೊಂಡು ಏನುಏನೊ ಹಲುಬಾಡಿಕೊಳ್ಳುತ್ತ, ಮನೆಗೆಲಸವನ್ನೂ ಮಾಡತೊಡಗಿದರು.

ಹೆಚ್ಚಾದ ವೇದನೆಯಿಂದ ಪ್ರತಿಯೊಬ್ಬರೂ ಚಡಪಡಿಸುತ್ತಿದ್ದರು. ಅಕ್ಕಪಕ್ಕದ ಮನೆಯವರು ಬಂದು, ಸಮಾಧಾನ ಹೇಳುತ್ತಾ, ಅಡಗುವ ಚಿಂತೆಯನ್ನು ಉಕ್ಕುಕ್ಕಿ ಬರುವಂತೆ ಮಾಡಿದ್ದಲ್ಲದೆ ಅವರವರಿಗೆ ತೋರಿದ ಕಾರಣಗಳನ್ನೂ ಕಲ್ಪಿಸಿ ಹೇಳಲಾರಂಭಿಸಿದರು.

* * *

ಕಲ್ಯಾಣಿ ಮರೆಯಾದಂದಿನಿಂದಲೇ ನಾಗು ಒಬ್ಬ ಹೊಸ ಮನುಷ್ಯನಂತೆ ಮಾರ್ಪಡಿಸಲಾರಂಭಿಸಿದ್ದನು. ಈ ಮೊದಲೇ ಅವನಿಗೆ ಕೊಂಚ ಖಾದಿ, ಸ್ವದೇಶೀ, ದೇಶಭಕ್ತಿ ಇಂತಹ 'ಹುಚ್ಚು' ಅಂಟಿಕೊಂಡಿತ್ತು. ಆದುದರಿಂದ ಕೊಂಚಕೊಂಚವಾಗಿ ದೇಶಸೇವೆಗೆ ಇಳಿಯಲಾರಂಭಿಸಿದ್ದನು. ಮನೆಯಲ್ಲಿದ್ದು ಕುಟುಂಬಕಾರ್ಯದಲ್ಲಿ ತೊಳಲಾಡಿಕೊಂಡಿರುವುದ

ಕ್ಕಿಂತಲೂ, ಹೊರಗಿದು ದೇಶಸೇವೆಯಲ್ಲಿ ತಿರುಗಾಡುತ್ತಿರುವುದೇ ಉಚಿತ ವೆಂದು ಅವನಿಗನಿಸಿತು.

* * *

ಒಂದು ದಿನ "'ಸ್ವರಾಜ್ಯ' ಪೇಪರ್! ಒಂದಾಣೆ!", ಎಂದು ಕೂಗುವ ಹುಡುಗನನ್ನು ಸುಂದರಿ ಕರೆದಳು. "ಒಂದಾಣೆಕೊಟ್ಟು ಈಗ ಯಾಕೆ ಪೇಪರ್? ತಮಿಳ್ ಪೇಪರ್ ಬರ್ತಾ ಇದೆಯಲ್ಲಾ? ಸಾಲದೊ? ಮಹಾ ಅಧಿಕಪ್ರಸಂಗಿಗಳು! ಎಂಥ ಮಕ್ಕಳಪ್ಪ! ಹಾರುವ ಹರಾಮಿ ಗಳು! ಕಾಸು ದುಡ್ಡುಗಳ ಬೆಲೆ ಗೊತ್ತಿದೆಯೆ? ಒಂದು ಪೇಪರ್ ಓದಿ ತಿಳಿದುಕೊಳ್ಳೋದೇ ಸಾಕಲ್ಲಾ. ಹೋಗೋ ಏ ಹುಡುಗಾ!" ಎಂದು ಶೇಷಜ್ಜಿ ಆ ಹುಡುಗನನ್ನು ಕಳಿಸಲೆತ್ನಿಸಿದಳು.

"ಇಲ್ಲಜ್ಜೀ—ಕೆಲವು ಸಾರಿ ಕಡೇಬಾರಿ ಬರುವ ಸುದ್ದಿಗಳು ತಮಿಳ್ ಪೇಪರಿನಲ್ಲಿ ಬರುವುದಿಲ್ಲ. ಇಂಗ್ಲಿಷ್ ಪೇಪರಿನಲ್ಲಿ ಒಡನೇ ಹಾಕಿಬಿಡು ತ್ತಾರೆ. ಅಣ್ಣಾ ಇನ್ನೂ ಬರಲಿಲ್ಲವಲ್ಲಾ, ಅಂತ ಅಮ್ಮನೇ ತಕ್ಕೊ ಅಂದಳು" ಎಂದಳು ಸುಂದರಿ.

"ನಿಮ್ಮ ಪಾಡು! ಏನುಬೇಕಾದರೂ ಮಾಡಿಕೊಳ್ಳಿ. ಗಂಡು ಹುಡುಗರು ನೋಡಿದರೆ ಪಿಕೆಟಿಂಗ್ ಮಾಡೋದು! ಹೆಣ್ಣು ಮಕ್ಕಳಿಗೆ ಇಂಗಿಲೀಷ್ ಪೇಪರ್ ಬೇಕು! ಮತ್ತೇನು ಬೇಕಿನ್ನು ಚೊಕ್ಕಾಗಲಿಕ್ಕೆ" ಎಂದರು ಶೇಷಜ್ಜಿ.

ಪತ್ರಿಕೆಯನ್ನು ತೆಗೆದುಕೊಂಡು ಬಿಡಿಸಿನೋಡಿದ ಸುಂದರಿ, ಅಂದು ಖೈದುಮಾಡಲ್ಪಟ್ಟವರಲ್ಲಿ ತನ್ನ ಅಣ್ಣನ ಹೆಸರೂ ಇರುವುವೆಂದೂ ಮರು ದಿವಸ ಹೆಚ್ಚಿನ ವಿವರಗಳು ತಿಳಿಯುಬರುವುದೆಂದೂ ಓದಿದ ಸಮಾಚಾರ ವನ್ನು ಹೇಳಿದಳು.

ಪತಂಜಲಿ ಶಾಸ್ತ್ರಿಗಳು ತುಂಬ ಬೇಸರದಿಂದ—"ಪಿಕೆಟಿಂಗಂತೆ! ಮಣ್ಣು! ಇವರಿಂದಲೇ ಪ್ರಪಂಚವು ನಿಲ್ಲುವಹಾಗಿದೆ. ಬೊಂಬೆಗಳೇ ಗೋಪುರವನ್ನು ಆಧರಿಸುವುವೆಂಬ ಹಾಗೆ. ಎಷ್ಟೋ ದೊಡ್ಡ ದೊಡ್ಡ ಮೇಧಾವಿಗಳೆಲ್ಲಾ ಮುಂದೆನಿಂತೇ ಒಂದೂ ಆಗಲಿಲ್ಲ. ಈ ಚಿಲ್ಲರೆ ಮನುಷ್ಯ ರೆಲ್ಲಾ ಹೋಗಿ ನಿಂತುಬಿಟ್ಟರೆ, ಸ್ವರಾಜ್ಯವನ್ನು ಉಂಡೆಯಾಗಿ ಮಾಡಿ ಇವರ ಕೈಗೆ ಕೊಟ್ಟುಬಿಡುತ್ತಾರಂತ ಕಾಣುತ್ತದೆ. ವರಾಹಾವತಾರಮಾಡಿ

ದೇವರು ಭೂಮಿಯನ್ನು ಉಂಡೆಯಾಗಿ ಎತ್ತಿಕೊಂಡು ಬಂದರೋ ಇಲ್ಲವೋ? ಹಾಗೇ ಅಂತ ತಿಳಿದಿದ್ದಾರೆ. ಕೆಲಸವಿಲ್ಲದವರಿಗೆಲ್ಲಾ ಇದೊಂದು ಕೆಲಸ. 'ಅವನವನ ಪಾಪಪುಣ್ಯಕ್ಕೆ ಅವನವನು ಹೋಗಲಿ, ನಮಗೇನು?' ಎಂದಿರೋದು ಬಿಟ್ಟು, ಅಧಿಕಪ್ರಸಂಗವನ್ನೆಲ್ಲ ಓದಿಯಾಯಿತು. ಏನೋ, ಒಂದು ಉದ್ಯೋಗವನ್ನು ಹುಡುಕಿಕೊಂಡು, ಅಥವಾ ಊರಲ್ಲಿ ಮನೆಹಿಡಿದು ವ್ಯವಸಾಯವನ್ನು ನೋಡಿಕೊಂಡು ಇರಲಿಕ್ಕಂತೂ ಒಂದಿಷ್ಟೂ ಸಾಮರ್ಥ್ಯವಿಲ್ಲ. ಕಾಲಿನಲ್ಲಿರುವ ಕಲ್ಲು ಹೆಕ್ಕಲಿಕ್ಕೆ ಬಾರದವನು ಕೋಟೆಗೋಡೆಯ ಕಲ್ಲನ್ನು ಕಿತ್ತಿಡುವೆನೆಂದ ಹಾಗೆ. ಇಂಥವರಿಗೆ ಓದಿಸಿದ್ದೇ ತಪ್ಪು: ಏನೋ ಒಂದು ಉದ್ಯೋಗ ಮಾಡಿಯಾನು ಎಂಬ ಆಶೆಗೆ ಹೋಗಿ, ಅದು ಹೀಗೆ ವಿಪರೀತವಾಯಿತು. ಯಾರನ್ನು ದೂರಿ ಏನು ಫಲ? ನೀನು ಎಡೆ ಕೊಟ್ಟು ಕೊಟ್ಟೇ ಆ ಹುಡುಗನ ಬುದ್ಧಿ ಹೀಗೆ ವಿಪರೀತವಾಯಿತು. ನಿನ್ನ ಮನಸ್ಸಿನಲ್ಲಿ ಮಗ ಜೈಲಿಗೆ ಹೋಗಿ ಬಂದರೆ ದೊಡ್ಡ ಮೆಡಲು ಸಿಕ್ಕಿದ ಹಾಗೆ ಎಂದು ಎಣಿಸಿದ್ದಿ. ನಿನ್ನ ಮನಸ್ಸಿನಂತೆಯೇ ಆಯಿತಲ್ಲ! ಹೇಗಾದರೂ ಹಾಳಾಗಿಹೋಗಿ. ನನ್ನ ಮಾತಿಗೆ ಏನು ಬೆಲೆ? ನೀವೆಲ್ಲಾ ದೊಡ್ಡ ದೇಶಭಕ್ತರು. ನಿಮಗೆಲ್ಲಾ ಇದಿರು ನಿಂತು ಮಾತಾಡಲಿಕ್ಕೆ ಕೂಡ ನಮಗೆ ಯೋಗ್ಯತೆಯಿಲ್ಲ" ಎಂದು ಹೇಳಿ ಶಾಸ್ತ್ರಿಗಳು ನಿಟ್ಟುಸಿರುಬಿಟ್ಟರು.

ಲಕ್ಷ್ಮಮ್ಮ ಬಾಯೇ ಬಿಚ್ಚಲಿಲ್ಲ. ಶೇಷಜ್ಜಿಯೂ ಬದಲೊರೆಯಲಿಲ್ಲ. ಅವರ ಮೌನವೇ ಅವರ ಮಾತನ್ನು ಅಷ್ಟುದೂರ ಕೋಪಕ್ಕೂ ಬೇಸರಕ್ಕೂ ಏರಿಸಿಬಿಟ್ಟಿತ್ತು. ಅದನ್ನು ಕಂಡ ಶೇಷಜ್ಜಿ—"ಏನೋ ಅಪ್ಪ, ಎಳೆಗರುವಿಗೆ ಹೆದರಿಕೆ ಇಲ್ಲ ಎಂಬ ಹಾಗೆ ಹೋಗಿದ್ದಾನು, ಹೋಗಲಿ. ನಾಳೆ ವಿಚಾರಣೆಯಲ್ಲಿ ಬಿಡುಗಡೆಯಾಗಿ ಬಂದರೆ, ಮತ್ತೆ ಹೋಗಕೂಡದಂತ ಖಂಡಿಸಿಬಿಟ್ಟರಾಯಿತಲ್ಲ. ಅಲ್ಲಾ, ಜೈಲಿಗೇ ಹೋದವರೂ, ಬಿಡುಗಡೆಯಾಗಿ ಬಂದಕೂಡಲೇ ಪನಂಗುಡಿಗೇ ಹೋಗಿಬಿಡುವ. ಆಗಲಿ, ಸೌಖ್ಯವಾಗಿ ತಿರುಗಿಬರಲಿ. ನಂತರ ಯೋಚಿಸುವಾ" ಎಂದರು.

* * *

ಕಲ್ಯಾಣಿ ಕಾಣೆಯಾಗಿ ಹೋಗಿದ್ದಾಗ ಲಕ್ಷ್ಮಮ್ಮನಿಗೆ ಆರು ತಿಂಗಳಾಗಿತ್ತು. "ಹೆತ್ತು ಬೆಳೆಸಿ ಸಾವಿರ ಪಾಡುಪಟ್ಟು ಹಾಳು ಬಾಳಿಗೆ.

ಬಿದ್ದಾಯಿತು. ಇನ್ನು ಮೇಲೆ ಹುಟ್ಟುವುದು ನಮ್ಮ ಉದ್ಧಾರ ಮಾಡುತ್ತೆ" ಎಂದು ಅವಳು ಬೇಸರಪಟ್ಟುಕೊಳ್ಳುವಳು. ಮಗಳನ್ನು ಅಗಲಿದ ದುಃಖದಿಂದ ಅವಳು ದಿನೇ ದಿನೇ ಸೊರಗಿ ಹೋಗುತ್ತ, ಎಲುಬು ತೊಗಲಾಗಿ ಇಳಿಯುತ್ತಿದ್ದಳು.

ಸಾಲದಿದ್ದುದಕ್ಕೆ ನಾಗು ಸೆರೆಮನೆಗೆ ಹೋದದ್ದೂ ಸೇರಿ, ಕುಟುಂಬವು ಅಲ್ಲೋಲ ಕಲ್ಲೋಲವಾಯಿತು. ದುಃಖವರಿಯದ ಚಿಕ್ಕವರಾದ ರಂಗನಾಥ—ಶ್ಯಾಮಳೆಯರು ಕೂಡಾ ದುಃಖಿಸಲಾರಂಭಿಸಿದರು.

ಲಕ್ಷ್ಮಮ್ಮನಿಗೆ ಪ್ರಸವಕಾಲವು ಸಮೀಪಿಸಿತು. ಹೆತ್ತು ಬದುಕಿಯೇನೆಂಬ ನಂಬಿಗೆಯೇ ಅವಳಿಗಿರಲಿಲ್ಲ. ಅವಳು ದುಃಖಿಸುತ್ತಿದ್ದಾಗಲೆಲ್ಲಾ ಅಜ್ಜಿ, "ಹೋದದ್ದೆಲ್ಲಾ ಹೋಯಿತು. ದಕ್ಕದ ವಸ್ತು ತರೆಯಲ್ಲಿ ಕವುಂಚಿಕೊಂಡಿತು. ಅವಳ ಚೆಂದಕ್ಕೂ ಬುದ್ಧಿವಂತಿಕೆಗೂ, ಅವಳೊಡನೆ ಸುಖವಾಗಿ ಸಂಸಾರ ಮಾಡಲಿಕ್ಕೆ ಆ ಪಾಪಿ ಪಡೆದು ಬರಲಿಲ್ಲ. ನಮ್ಮ ಹೊಟ್ಟೆಯೂ ಪಾಪದ ಪದರಾಯಿತು. ಏನುಮಾಡುವುದು? ಏನೋ ನೀನಾದರೂ ನಿನ್ನ ಮರಿಗಳಿಗೆ ತಾಯಾಗಿದ್ದರೆ ಸಾಕು. ಜನ್ಮಾಂತರದಲ್ಲಿ ಒಳ್ಳೇ ಹೂವನ್ನು ಹೆಕ್ಕಿ ಪೂಜೆ ಮಾಡಿಲ್ಲ. ಹೀಗೆ ನಿನ್ನ ಮೇಲೆ ಸಿಡಿಲು ಬೀಳುತ್ತಾ ಇದ್ದರೆ ಯಾಕಾದೀತು? ಮನೆ ಜರಿದರೆ ಕಟ್ಟಬಹುದು; ಮನಸ್ಸು ಜರಿದರೆ ಕಟ್ಟಲಾದೀತೇ?" ಎನ್ನುವರು. ಶಾಸ್ತ್ರಿಗಳು ಏನೋ ಯಂತ್ರದಹಾಗೆ ಉಣ್ಣುವುದೂ ಸುಮ್ಮನೆ ಎಡತಾಕುವುದೂ ಹೊರತು ಮತ್ತೇನೂ ಗಮನಿಸಲಾರದಿದ್ದರು. ಲಕ್ಷ್ಮಮ್ಮ ದಿನ ದಿನಕ್ಕೆ ಕ್ಷೀಣಿಸುತ್ತಾ ಬರುತ್ತಿದ್ದಳು.

# ಸಿಡಿಲಿನಮೇಲೆ ಸಿಡಿಲು

"ಏ ಮೂಢ! ಏ ಮುಡ್ಡಿ! ನಿನ್ನನ್ನು ಹೆತ್ತಳಲ್ಲಾ ಕೆಲಸವಿಲ್ಲದೆ! ಹುಡುಕಿ ಹಿಡಿದ ಬಂಗಾರದುಂಗುರವೆ! ಕಂಡು ಹಿಡಿದ ಕಟ್ಟಾಣಿ ಮಣಿಯೇ!" ಎಂದು ಗಟ್ಟಿಯಾಗಿ ಕೂಗುವುದು ಕೇಳಿ ಪತಂಜಲಿ ಶಾಸ್ತ್ರಿಗಳು ಕಣ್ಣುಬಿಟ್ಟರು. ಪ್ರಸವದ ಕೊಟ್ಟಡಿಯಿಂದ ಲಕ್ಷ್ಮಮ್ಮ ಹೊರಗೆ ಬಂದು, ಅವರು ಒರಗಿದ್ದ ಕುರ್ಚಿಯ ಬಳಿಯೇನಿಂತು ಮೇಲಂದಂತೆ ಕೂಗಿಕೊಳ್ಳುತ್ತಿದ್ದಳು.

"ಅಮ್ಮಾ! ಅಮ್ಮಾ! ಇಲ್ಲಿ ಬಾ ಬೇಗ! ಸನ್ನಿಯೋ ಗಿನ್ನಿಯೋ ಏನೋ!" ಎಂದು ಭಯದಿಂದ ನಡುಗುತ್ತ ಶಾಸ್ತ್ರಿಯವರು ಕೂಗಿದರು.

ಶೇಷಜ್ಜಿ ಒಂದೇ ಓಟದಿಂದ ಓಡಿಬಂದು ಅವಳನ್ನು ಗಟ್ಟಿಯಾಗಿ ಹಿಡಿದುಕೊಂಡು "ಏನಮ್ಮ ಇದು? ಒಳಗೆ ಬಾರೆ, ಒಳಗೆ ಬಾರೆ" ಎಂದು ಮೆಲ್ಲನೆ ಅವಳನ್ನು ಒಳಗೊಯ್ಯಲೆತ್ನಿಸಿದರು.

ಲಕ್ಷ್ಮಮ್ಮ ಮದಹಿಡಿದವಳಂತೆ ವೈಯೇರುತಿದ್ದಳು. ರಂಗನಾಥನು ಡಾಕ್ಟರನ್ನು ಕರೆದುತರಲಿಕ್ಕೆ ಓಡಿದನು. ಶಾಸ್ತ್ರಿಗಳು ಪಾಪ, ಏನುಮಾಡಿಯಾರು? ಲಕ್ಷ್ಮಮ್ಮನನ್ನು ಸಮಾಧಾನಮಾಡಿ ಮಲಗಿಸಬೇಕಾದರೆ ಸಾಕುಸಾಕಾಗಿ ಹೋಯಿತು. ಶಿಶು "ಕುವಾ ಕುವಾ" ಎಂದು ಎಡೆಬಿಡದೆ ಚೀರುತ್ತಿತ್ತು. ಅದರೊಂದಿಗೆ ಶೇಷಜ್ಜಿಯೂ ಅಳುತ್ತಿದ್ದಳು. "ಒಂದರ ಹಿಂದೊಂದಾಗಿ ಇದೆಂಥ ಕಷ್ಟ! ಆ ಹೆಣ್ಣಿನಿಂದ ಬಂದ ಬನ್ನವೂ ಈ ದೊಡ್ಡ ಕೋಣ ಜೈಲಿಗೆ ಹೋದ ದುಃಖವೂ ಸಾಲದೊ? ಇನ್ನೆಂಥ ದೊಡ್ಡ ಸಿಡಿಲು ತಲೆಗೆ ಬೀಳಲು ಕಾದಿದೆಯೊ! ತಿಳಿಯದೆಯೋ ದೊಡ್ಡವರು 'ಸಂಸಾರ ಸಾಗರಂ ದುಃಖಂ' ಎಂತ ಹೇಳಿದ್ದು? ಜೋಯಿಸರ ಬಾಯಿಗೆಲ್ಲಾ ಹಿಡಿ ಮಣ್ಣು ಹಾಕ! ಏಳೂವರೆ ಶನಿ ಎಂಟೂವರೆ ಶನಿ, ಇದು ಮಾಡು ಅದು ಮಾಡು ಅಂತ ಅವರಂದ ಒಂದೊಂದೂ ಮಾಡಿಯಾಯ್ತು. ಫಲವೇನು? ಅಯ್ಯೋ ಸಹಿಸಲಿಕ್ಕಾಗುವುದಿಲ್ಲವಲ್ಲ, ದೇವರೆ! ಜನಿವಾರ ಕಡಿದುಹಾಕಿಕೊಂಡು ಓಡಿಬಿಡುವುದೇ ಮೇಲು. ಕರ್ಮ! ಕರ್ಮ! ಸಂಚಿತ ಕರ್ಮ!" ಎಂದು ಶಾಸ್ತ್ರಿಗಳು ತಲೆಯನ್ನು ಹೊಡೆದುಕೊಂಡರು. "ಠಕ್ಕ್ ಠಕ್ಕ್"

ಎಂದು ಬೂಟ್ಸಿನ ಸದ್ದು ಕೇಳಿತು. ಮರುನಿಮಿಷ ಡಾಕ್ಟರು ಬಂದರು. ಲಕ್ಷ್ಮಮ್ಮ "ಅಣ್ಣಾ! ಅಣ್ಣಾ! ಬನ್ನಿ. ತಿನ್ನಲಿಕ್ಕೆ ಏನುಬೇಕು?" ಎಂದಳು.

ಡಾಕ್ಟರು ಅವಳ ಬದಿಗೆ ಹೋಗಿ—"ಅಮ್ಮ ಸ್ವಲ್ಪ ಥರ್ಮಾಮೀಟರ್ ಇಟ್ಟುಕೊಳ್ಳುತ್ತೀರಾ?" ಎಂದು ತುಂಬ ಸಮಾಧಾನದಿಂದ ಕೇಳಿದರು. ಅವಳು ಹಾಗೆಯೇ ಮಾಡಲು ಡಾಕ್ಟರು, ಥರ್ಮಾಮೀಟರನ್ನು ನೋಡಿ—"ಜ್ವರವಿಲ್ಲ. ನಿಮಗೇನಾಗುತ್ತದೆ ಅಮ್ಮ?" ಎಂದು ಕೇಳಿದರು.

"ಲಕ್ಷ್ಮಮ್ಮ ಎದ್ದು ನಿಂತುಕೊಂಡಳು.—"ಏನಾಗುತ್ತದಾ? ಯಾರಿಗೆ? ನೀನಾರೋ ವೇಷಧಾರಿಯಾಗಿಬಂದಿದ್ದಿ? ನಿನಗೇನು ಕೊಂಬು ಒಡೆದಿದೆಯೊ?" ಎನ್ನುತ್ತಾ ಡಾಕ್ಟರನ್ನು ಸಮೀಪಿಸಿದಳು. ಡಾಕ್ಟರು ಭಯಪಟ್ಟು ಹಿಂದೆ ಹಿಂದೆ ಜರುಗುತ್ತ—"ಮಲಗಿಕೊಳ್ಳಿ ಮಲಗಿಕೊಳ್ಳಿ. ಅಜ್ಜಿ! ಮಲಗಿಸಿರಿ" ಎಂದು ಹೇಳುವಾಗ, ಲಕ್ಷ್ಮಮ್ಮ ಡಾಕ್ಟರ ತೀರ ಬಳಿಗೆ ಬಂದು ರಹಸ್ಯವಾಗಿ—"ಈ ರಾಕ್ಷಸನೂ ಈ ರಾಕ್ಷಸಿಯೂ ನನ್ನನ್ನೂ ನನ್ನ ಮಗುವನ್ನೂ ತಿಂದುಬಿಡುತ್ತಾರೆ. ಹೇಗಾದರೂ ಕಾಪಾಡಿ. ನಿಮಗೆ ಏನುಬೇಕಾದರೂ ಕೊಟ್ಟೇನು" ಎಂದು ಹೇಳುತ್ತಾ ಅಳತೊಡಗಿದಳು. ಅವಳ ಮೆದುಳು ಕೆಟ್ಟುಹೋಗಿದೆಯೆಂದು ಕಂಡುಹಿಡಿದರು ಡಾಕ್ಟರು. ಎಷ್ಟೋ ಸಮಾಧಾನಮಾಡಿ, ಅವಳನ್ನು ಮಲಗಿಸಲೆತ್ನಿಸಿದಾಗ ಅವಳು ಮತ್ತೆ ಅವರ ಬಳಿಗೆ ಬಂದು—"ಆಗಲೇ ಎರಡು ಮಕ್ಕಳನ್ನು ಇವರ ಬಾಯಿಗೆ ಹಾಕಿಬಿಟ್ಟೆ. ನನ್ನ ರಾಣಿ, ನನ್ನ ಕಮ್ಮಣಿ, ನನ್ನ ಬಂಗಾರ, ನನ್ನ ಕಲ್ಯಾಣಿಯನ್ನೂ ಇವರು ತಿಂದಾಯಿತು. ನನ್ನ ಹುಡುಗ ನಾಗರಾಜನನ್ನೂ ನುಂಗಿದ್ದಾರೆ. ಇದನ್ನಾದರೂ ಕಾಪಾಡಿ" ಎಂದು ಆರಂಭಿಸಿಬಿಟ್ಟಳು. ಡಾಕ್ಟರ ಪಾಡು ಮಂಗಾಟವಾಯಿತು. ಅವರು ಮೆಲ್ಲ ಮೆಲ್ಲನೆ ಅತ್ತತ್ತ ಸರಿದು, ಕೋಣೆಯೊಳಗಿದ್ದ ಶಾಸ್ತ್ರಿಗಳನ್ನು ಕುರಿತು,—"ಮಿದುಳು ಕೆಟ್ಟಿದೆ. ಬೇರೆ ಮದ್ದು ಬರೆದುಕೊಡುತ್ತೇನೆ. ತಂದುಕೊಡಿ. ನಿದ್ದೆಬಂದರೆ ಒಳ್ಳೆಯದು. ಮಗುವನ್ನು ಜಾಗ್ರತೆಯಿಂದ ನೋಡಿಕೊಳ್ಳಿ. ಮಿತಿಮೀರಿದ ಪ್ರೀತಿಯಿಂದ ಕೊಂದುಗಿಂದು ಹಾಕಿಯಾಳು." ಎಂದು ಎಚ್ಚರಿಕೆ ಕೊಟ್ಟು ಹೋದರು.

"ಇದೊಂದು ಕಡಮೆಯಾಗಿತ್ತು, ಅಯ್ಯೋ! ಸುಂದರಿ, ರಂಗನಾಥ ನಿಗೂ ಶ್ಯಾಮಳೆಗೂ ಏನಾದರೂ ಕೊಡೇ. ಅಮ್ಮನ ಹತ್ತಿರ ಅಜ್ಜಿ ಇರಲಿ. ಹೊರ ಕೆಲಸಗಳನ್ನೆಲ್ಲ ಶ್ಯಾಮಳೆಯೂ ನೀನೂ ನೋಡಿಕೊಳ್ಳಿರಿ" ಎಂದಂದು —"ಹುಂ, ಒಂದು ಹುಡುಗಿ ಹೋಯಿತು. ಹುಡುಗ ಹೋದ. ಏನು ಪಾಪ ಮಾಡಿದೆವೋ ಅನುಭವಿಸಿ ತೀರಬೇಕಲ್ಲ?" ಎಂದು ಹೇಳುತ್ತಿದ್ದಾಗ "ಅಪ್ಪಾ, ಸ್ವಾಮಿಗಳು ಹೊರಗೆ ಬಂದಿದ್ದಾರೆ" ಎಂದಳು, ಶ್ಯಾಮಳೆ.

"ಸ್ವಾಮಿಗಳಾ? ಕುಳಿತುಕೊಳ್ಳೀ ಅಂತ ಹೇಳು. ನೀನು ಈಚೆ ಕೋಣೆಯಲ್ಲಿಯೇ ಕುಳಿತು ಓದುತ್ತಾ ಕೂತುಕೊ. ಅಮ್ಮ ಏನಾದರೂ ಹೇಳಿದರೆ ನನ್ನನ್ನು ಕರಿ. ಹಗ್ಗ ತೆಗೆದುಕೊಂಡು ಹಾರಲಿಕ್ಕೂ ಹೂ ತಿರಿಯ ಲಿಕ್ಕೂ ಹೋಗಿಬಿಡಬೇಡ. ಅಕ್ಕನಿಗೆ ಸಹಾಯ ಮಾಡುತ್ತ ಇನ್ನು ಮೇಲೆ ಎಲ್ಲಾ ಕೆಲಸಗಳನ್ನೂ ನೀನೇ ನೋಡಬೇಕು" ಎಂದಂದು ಶಾಸ್ತ್ರಿಗಳು ಹೊರಗಿನ ಚಾವಡಿಗೆ ಬಂದರು.

ಸ್ವಾಮಿಗಳು ಕಣ್ಣುಮುಚ್ಚಿ ಧ್ಯಾನಾಸಕ್ತರಾಗಿ ಕುಳಿತಿದ್ದರು. ಶಾಸ್ತ್ರಿ ಗಳು ಕೈಜೋಡಿಸಿ "ಸ್ವಾಮಿಗಳು ಬಂದು ಬಹಳ ಹೊತ್ತಾಯಿತೆ?" ಎಂದು ಕೇಳಿದರು. ಸ್ವಾಮಿಗಳು ತಟ್ಟನೆ ಕಣ್ಣು ತೆರೆದು—"ಅಪ್ಪ! ಕಾಲಚಕ್ರವು ಸುತ್ತಿಕೊಂಡಿದೆ. ನಡೆಯಬೇಕಾದುದು ನಡೆದೇತೀರುತ್ತದೆ. ವೃಥಾ ದುಃಖವೇಕೆ? ಇನ್ನೇನೂ ಆಗಲಾರದು. ಶಿವನು ಸತ್ತುಬಿಟ್ಟನೊ? ಉಮೆಯೂ ಸತ್ತಳೊ? ನನ್ನಮ್ಮ ಕಲ್ಪಕಾಂಬೆ ಕಲ್ಪ ವೃಕ್ಷವಲ್ಲವೇ?" ಎಂದರು.

ಶೇಷಜ್ಜಿಗೆ ಸ್ವಾಮಿಗಳೆಂದರೆ ಅನೇಕವಾಗಿ ಪೋಲಿಗಳೆಂದೂ ಮೋಸ ಗಾರರೆಂದೂ, ಏನಾದರೂ ಜಾರಿಸಿಕೊಂಡು ಹೋಗಿಬಿಡುವರೆಂದೂ ಎಣಿಕೆ ಯಿತ್ತು. ಹೇಳಿದರೆ ಶಾಸ್ತ್ರಿಗಳಿಗೆ ಕೋಪ ಬಂದೀತೆಂದು, ಸ್ವಾಮಿಗಳು ಬಂದರೆಂದರೆ ತನಗೆ ತಾನೇ ಗುಣುಗುಣಿಸಲಾರಂಭಿಸುತ್ತಿದ್ದರು.

"ಸ್ವಾಮಿಯೋ ಭೂತವೋ! ಮನೆಯಿರುವ ಲಕ್ಷಣಕ್ಕೆ ವೇದಾಂತ ಒಂದು ಬಾಕಿ. ಈ ಹಾಳಾದ ಸ್ವಾಮಿ ಬಂದಂದಿನಿಂದಲೇ ಒಂದೊಂದಾಗಿ ಕಷ್ಟಕ್ಕೆ ಆರಂಭವಾಗಿದೆ. ಸ್ವಾಮಿಗಳಾದರೆ ಎಲ್ಲಿಯಾದರೂ ಕಾಡಿಗೋ ಗುಡ್ಡಕ್ಕೋ ಹೋಗೋದು ತಾನೇ? ಊರಿನೊಳಗೆ ಏನುಕೆಲಸ? ಸಂಸಾರಿ

ಗಳೊಂದಿಗೆ ಏನುಮಾತು? ಭಿಕ್ಷೆ ಎತ್ತಿ ತಿಂದು ಗುಡಿಯೊಳಗೇ ಬಿದ್ದಿರೋದು ಬಿಟ್ಟು, ಬೀದಿ ವಿಳಾಸಕ್ಕೆಲ್ಲಾ ಬಂದು ಕೂಡುವ ಅಗತ್ಯವೇನು? ಅವ ಲಕ್ಷಣಗಳು!" ಎನ್ನುತ್ತಿದ್ದಾಗ, ಸುಂದರಿ ನಡುವೆ ತಡೆದು,—"ಏನಜ್ಜಿ? ನಾನು ಹೇಳಿದರೆ ದೊಡ್ಡವರನ್ನು ನಿಂದಿಸಲಾಗದು, ದೋಷ ಎನ್ನುತ್ತೀರಿ? ನೀವು ಮಾತ್ರ ಬಯ್ಯಬಹುದೊ? ಸ್ವಾಮಿಗಳು ಬಂದದ್ದರಿಂದ ಕೆಟ್ಟು ದಾದೀತಾ? ಅವರು ಬಾರದಿದ್ದರೆ ಕೆಡಕು ಬಾರದಿದ್ದೀತೋ?" ಎಂದಳು.

ಈ ಕಾಲದ ಹುಡುಗಿಯರಿಗೇ ಬಾಯಿ ಅಧಿಕ. ಒಂಭತ್ತೂ ಹತ್ತೂ ತೊಂಭತ್ತೂ ನಡುವೇ ಇಪ್ಪತ್ತೂ ಅಂತ ಮಾತಾಡಲಿಕ್ಕೆ ಹತ್ತಿಬಿಡುತ್ತವೆ! ನಿನಗೆ ಪ್ರಪಂಚದಲ್ಲಿ ನಡೆಯುವ ಅಕ್ರಮಗಳೆಲ್ಲ ಏನು ಗೊತ್ತಿದೆ?" ಎಂದು ಹೇಳುತ್ತಿದ್ದಾಗ, ಲಕ್ಷ್ಮಮ್ಮ ಹಾಡಲಾರಂಭಿಸಿದ್ದು ಕೇಳಿ, ಶೇಷಜ್ಜಿ ಅತ್ತ ನಡೆದರು.

*  *  *

"ಅಮ್ಮಾ, ಅಳಿಯ ರಾಜು ಕೆಲಸ ಹುಡುಕಲಿಕ್ಕಾಗಿ ಇಲ್ಲಿಗೆ ಬರುತ್ತಾನಂತೆ. ಬರುವ ತಿಂಗಳು ಮೊದಲನೇ ವಾರದಲ್ಲಿ ಬರುವುದಾಗಿ ಬರೆದಿದ್ದಾನೆ. ನಾಗರಾಜ ಬಂದರೆ ಒಂದು ವೇಳೆ ಇವಳಿಗೆ ಗುಣವಾದೀತು ಎನ್ನುತ್ತಾರೆ ಡಾಕ್ಟರು. ಅವನು ಬರುವುದಕ್ಕೆ ಇನ್ನೂ ಒಂದು ವರ್ಷ ಹೋದೀತು. ಪಾಳಯಂಕೋಟೆಯಲ್ಲಿ ಇವನಿಗೆ ಪಂಪುಹೊಡೆಯುವ ಕೆಲಸವಂತೆ. ಮೈಯಲ್ಲಿ ಚೆಂದಾಗಿ ಉಬ್ಬಿಕೊಂಡಿದ್ದಾನಂತೆ. ಇನ್ನು ಮೇಲೆ ರಾಜಮಹೇಂದ್ರಿಗೋ ಕೊಯಂಬತ್ತೂರಿಗೋ ಕರೆದೊಯ್ದುಬಿಡು ತ್ತಾರಂತೆ. ಅವನು ಬಂದ ಮೇಲೆಯೇ ಗುಣವಾದೀತೆಂದಾದರೆ ಅದುವರೆಗೆ ಹೀಗೇ ಇರುವುದೇನಾ? ಮೈಯಲ್ಲಿ ಒಳ್ಳೆಯ ರಕ್ತ ಹುಟ್ಟಿ ಪಿತ್ತಕೋಶವು ಸರಿಯಾದರೆ ವಾಸಿಯಾದೀತಂತೆ....ಯಾರಿಗೆ ಗೊತ್ತು?....ಹುಂ" ಎಂದು ಪೇರುಸಿರುಗರೆದರು ಶಾಸ್ತ್ರಿಗಳು.

ಇಷ್ಟು ದುಗುಡಗಳೆಡೆಯಲ್ಲಿಯೂ ತನ್ನ ಗಂಡನು ಬರುತ್ತಾನೆಂದು ತಿಳಿದು, ಸಂತೋಷದಿಂದ ದಿವಸವನ್ನೆಣಿಸಲಾರಂಭಿಸಿದ್ದಳು ಸುಂದರಿ.

ಕಲ್ಯಾಣಿಯ ಮದುವೆ ನಡೆದಾಗ, ಕುಟುಂಬವು ದುಃಖವನ್ನೇ ಅರಿಯದೇ ಇದ್ದುದನ್ನೂ, ಮದುವೆ ಬಲು ಗೌಜಿಯಿಂದ ನಡೆದುದನ್ನೂ

ಅನಂತರ ತನ್ನ ಮದುವೆಯವೇಳೆಯಲ್ಲಿ, ಕಷ್ಟನಿಷ್ಠುರಗಳೂ, ದೀನತನವೂ ಮನೆಯೊಳಗೆ ಏರ್ಪಡಲಾದುದನ್ನೂ ನೆನೆದು ಸುಂದರಿ ನಿಟ್ಟುಸಿರಿಡುವಳು. ಆದರೆ ಒಂದು ವಿಷಯದಲ್ಲಿ ಅವಳಿಗೆ ತೃಪ್ತಿ; ತನಗೆ ಉಡುಗೊರೆ ವೈಭವಗಳೆಲ್ಲ ಅಷ್ಟೇನಿಲ್ಲದಿದ್ದರೂ, ತನ್ನ ಪತಿ, ಭಾವನ ಹಾಗಿಲ್ಲದೆ, ಯೋಗ್ಯನಾಗಿಯೂ, ತನ್ನಲ್ಲಿ ಅತ್ಯಂತ ಪ್ರೇಮವುಳ್ಳವನಾಗಿಯೂ ಇರುವುದನ್ನು ನೆನೆದು ಸಂತಸಪಡುತ್ತಿದ್ದಳು.

ಶ್ಯಾಮಳೆ ಓದನ್ನು ನಿಲ್ಲಿಸಿ ಆರು ತಿಂಗಳಾಗಿತ್ತು. "ಮನೆಗೆ ಬಂದಿರುವ ಲಕ್ಷಣಕ್ಕೆ ಶಾಲೆಯೂ ಸಾಕು, ಕೇರಿಯೂ ಸಾಕು. ಕಲಿತವರೆಲ್ಲಾ ಏನು ಮಾಡುತ್ತಾರೆ ಮಹಾ? ಸುಂದರಿ ಮೆಟ್ರಿಕುಲೇಶನ್ ಕಲಿತು ಏನು ಮಗುಚಿ ಹಾಕಿಬಿಟ್ಟಳು? ಕಾಸನ್ನು ಕರಿಯಾಗಿಸುವ ಹಾಳು ಓದು ಸಾಕು" ಎಂದು ಶೇಷಜ್ಜ ಖಂಡಿಸಿಬಿಟ್ಟರು.

"ರಂಗನಾಥನು ಈ ವರ್ಷವೇ ಪರೀಕ್ಷೆಗೆ ಹೋಗಬೇಕು. ಮನೆಯೋ ಹೀಗೆ ಅಲ್ಲಕಲ್ಲೋಲವಾಗಿದೆ. ಬತ್ತದ ಬೆಲೆ ಇಳಿದು ಹೋದದ್ದರಿಂದ, ಊರಿಂದ ಕಳೆದ ವರ್ಷದಿಂದಲೇ ಹಣವೂ ಸರಿಯಾಗಿ ಬಂದಿರಲಿಲ್ಲ. ಮದರಾಸಿಗೆ ಯಾಕೆಬಂದೆವೋ ಎಂಬ ಹಾಗಾಗಿದೆ. ಈ ವರ್ಷಾಂತದಲ್ಲಿ ಮತ್ತೆ ಪನಂಗುಡಿಗೇ ಹೋಗಿಬಿಡಬೇಕಾದ್ದೇ" ಎಂದು ಪತಂಜಲಿ ಶಾಸ್ತ್ರಿಗಳು ಆಲೋಚಿಸಿದ್ದರು.

ಶ್ಯಾಮಳೆಯೋ, "ನನ್ನಕ್ಕಂದಿರಿಗೋ ಹದಿನೈದಿಪ್ಪತ್ತು ರೂಪಾಯಿ ಕೊಟ್ಟು ಸಂಗೀತ ಮಾಸ್ತರನ್ನಿಟ್ಟು ಸಂಗೀತ ಕಲಿಸಿದ್ದಾರೆ. ವಿದ್ಯೆಯೂ ಕಲಿಸಿದರು. ನಮ್ಮ ಸರದಿ ಬಂದಾಗ ಈ ಗತಿ ಬಂತು. ನಮ್ಮ ದುರ್ಭಾಗ್ಯ! ಪನಂಗುಡಿಯಲ್ಲಿ ಸಂಗೀತ ಮಾಸ್ತರೆಲ್ಲಿಂದ?" ಎಂದು ನೊಂದುಕೊಂಡಳು.

# ತಾಗಿದ ಕಾಲಿಗೇ ತಾಗುವುದು

"ಸುಂದರಿ! ಯಾರ ಕಾಗದವೊ? ತುಂಬ ದಪ್ಪವಾಗಿದೆಯಲ್ಲಾ. ಬಿಡಿಸಿ ನೋಡೆ" ಎಂದರು ಶೇಷಜ್ಜಿ.

"ಬೇಡಜ್ಜಿ. ಬಿಡಿಸಿ ನೋಡಿದರೆ ಅಪ್ಪನಿಗೆ ಸಿಟ್ಟು ಬಂದೀತು. ಮುದ್ರೆ ನೋಡಿದರೆ ಪನಂಗುಡಿ ಎಂದಿದೆ. ಅವರೇ ಬಂದು ಓದಿ ಹೇಳಲಿ" ಎಂದಳು.

"ಹಾಗೆ ಕೋಪಿಸಿಕೊಂಡರೆ ನಾನು ಹೇಳುತ್ತೇನೆ. ಬಿಡಿಸಿ ಓದು" ಎಂದು ಶೇಷಜ್ಜಿ ಒತ್ತಾಯಿಸಿದರು.

ಸುಂದರಿ ಮನಸ್ಸಿನಲ್ಲಿ ತುಂಬ ಹೆದರಿದರೂ ಅಜ್ಜಿಯ ಮಾತು ಮೀರಲಾರದೆ ಕವರನ್ನೊಡೆದು ಪತ್ರವನ್ನು ಬಿಡಿಸಿ ಓದಿದಳು.

ಪನಂಗುಡಿ

ಮಾವನವರಿಗೆ,

ಪ್ರಣತಾರ್ತಿ ಹರದೀಕ್ಷಿತರ ಕುಮಾರ ನೀಲಕಂಠನು ಮಾಡುವ ಸಾಷ್ಟಾಂಗ ನಮಸ್ಕಾರ. ಉಭಯ ಕುಶಲೋಪರಿ. ನೀವು ಹೊರಟು ಹೋದಮೇಲೆ ಇಲ್ಲಿಗೆ ಒಂದು ಬಾರಿ ಕೂಡಾ ಬಂದು ಹೋಗಲಿಲ್ಲ. ನೆಲ ಹೊಲಗಳನ್ನೆಲ್ಲಾ ಹೀಗೆ ನಂಬಿ ಬಿಟ್ಟು ಹೋದುದಕ್ಕಾಗಿ ನನಗೆ ತುಂಬ ದುಃಖವಾಗಿದೆ. ನಾನು ಬರೆದರೆ ನೀವೇನಾದರೂ ತಪ್ಪರ್ಥ ಮಾಡಿಕೊಂಡೀರೆಂದು, ಈವರೆಗೂ ಬರೆಯಲಿಲ್ಲ. ಆದರೂ ತಮಗೆ ತಿಳಿಸದೆ ಇರಬಾರದೆಂದು ಈಗ ಬರೆಯುವ ಸಾಹಸ ಮಾಡಿದೆ. ನಿನ್ನೆ ನಾವು ಬಡಗುಡಿ ಮೃತ್ಯುಂಜಯ ಶಾಸ್ತ್ರಿಗಳ ಮೈದುನನ ಮನೆಗೆ ಹೋಗಿದ್ದೆವು. ಆಗ ಗುಸಗುಸನೆ ಎರಡೊಂದು ಮಾತು ನಮ್ಮ ಕಿವಿಗೆ ಬಿತ್ತು.

ಹೋದ ತಿಂಗಳು ನಿಮ್ಮ ರಾಮು (ರಾಮಭದ್ರ ದೀಕ್ಷಿತ) ಯಾರೋ ಒಬ್ಬಳು ಒಕ್ಕಲಿಗ ಹೆಣ್ಣಿಗೆ ಏನೋ ಹೇಳಿದನೆಂದು,

ಅವಳ ಕಡೆಯುವರು ಬೀದಿಯ ಬದಿಯಲ್ಲಿದ್ದ ಒಣಹುಲ್ಲ ಮೆದೆಗೆ ಬೆಂಕಿ ಹಚ್ಚಿಬಿಟ್ಟರಂತೆ. ಬಹಳ ಗದ್ದಲವಾಗಿ ಮನೆಗಳೆಲ್ಲಾ ತಪ್ಪಿ ಉಳಿದದ್ದು ದೇವರ ದಯೆ. ಈ ವಿಷಯಗಳು ಈ ಮೊದಲೇ ನಿಮಗೆ ತಿಳಿದಿದ್ದೀತು. ನಿಮ್ಮ ಮೇಲಕಾಡಿನ ಈಚಲ ಮರಗಳಲ್ಲಿ ಮುರ್ಪೆ ಮಾಡಲ್ಪಟ್ಟಿವೆ. ಇದಕ್ಕಿಂತಲೂ ಮುಖ್ಯವಾದ ವಿಷಯ ಇನ್ನೊಂದು: ರಾಮು ಸುಳ್ಳು ರುಜು ಹಾಕಿ, ವರಪ್ಪೋರದ ನಂಜವನ್ನೂ, ಮೇಂಕಾಡು ಪುಂಜವನ್ನೂ ವಳಕೊಳ ಕಾ. ಕಿ. ಕಾತ್ರವರಾಯ ಚೆಟ್ಟಿಗೆ ಅಡವು ಹಾಕಿದ್ದಾನೆಂದು ಗುಟ್ಟಿನಲ್ಲಿ ನನಗೆ ತಿಳಿದು ಬಂದಿದೆ.

ಈ ವಿಷಯವೆಲ್ಲ ನಾನು ಬರೆದುದಾಗಿ ಬಹಿರಂಗಪಡಿಸುವುದು ಬೇಡ. ನೀವಾಗಿ ಅಕಸ್ಮಾತ್ ಬರುವಂತೆ ಬಂದು ಕಂಡುಕೊಳ್ಳಿರಿ. ತಿಳಿದರೆ ನಮಗೆ ಕಷ್ಟ. ದೀಕ್ಷಿತನ ಹೆಂಡತಿಗೆ ಬಂಗಾರದ ಆಭರಣಗಳು ತುಂಬಾ ಬಂದಿವೆ. ಇದೆಲ್ಲಾ ಏನೋ ಹೊಟ್ಟೆಕಿಚ್ಚಿನಿಂದ ಹೇಳಿದೆನೆಂದು ಅಲಕ್ಷ್ಯವಾಗಿರದೆ ಒಡನೇ ಬಂದು, ಸರಿಪಡಿಸಿಕೊಂಡು ಹೋಗಬೇಕೆಂದು ಕೇಳಿಕೊಳ್ಳುತ್ತೇನೆ. ಇದನ್ನು ತಂತಿಯಂತೆ ತಿಳಿದು ಒಡನೆ ಹೊರಡಿ. ಇನ್ನೂ ಏನೇನು ಮಾಡಿದ್ದಾನೋ. ಮೊನ್ನೆಯೇ ಬರೆದು ಹಾಕುತ್ತಿದ್ದೆ. ಟಪ್ಪಾಲು ಚೀಟಿಗೆ ಕಾಸಿಲ್ಲ. ಅದಕ್ಕೇ ಈದಿನ ಬರೆದೆ.

ಇಂತೀ ಅನೇಕ ನಮಸ್ಕಾರ

**ನೀಲಕಂಠ**

ಈ ವಿಷಯಗಳನ್ನು ಕೇಳಿ ಕೇಳಿ, ಶೇಷಜ್ಜಿಗೆ ವ್ಯೆಹಾರತೊಡಗಿತು. ಆ ದೀಕ್ಷಿತನನ್ನು ಹಿಡಿದು ಗುದ್ದಿ ಚಟ್ನಿ ಮಾಡೋಣವೇ ಎನ್ನಿಸಿತು. ಸುಂದರಿಯನ್ನು ಮೆಲ್ಲನೆ ಕರೆದು, "ಅಮ್ಮನಿಗೆ ಚಿತ್ತಸ್ವಾಧೀನವಿಲ್ಲದಿದ್ದರೂ, ಕೆಲವು ವಿಷಯಗಳು ಚೆನ್ನಾಗಿ ತಿಳಿಯುತ್ತವೆ. ಇದೂ ತಿಳಿದು ಇನ್ನೂ ವಿಪರೀತವಾದರೆ ಮಾಡುವುದೇನು? ಈಗ ತಾನೇ ಕೊಂಚ ನಿದ್ದೆ ಬಂದದೆ. ಕಾಗದವನ್ನು ಮುಡಿಸಿಡು. ಅಪ್ಪ ಬಂದಾಗ ನಾನೇ ಕೊಡುತ್ತೇನೆ. ಹೇಗೂ

ಈವತ್ತಿನ ರೈಲಿಗೆ ಹೋಗಲಿಕ್ಕೆ ಆಗುವುದಿಲ್ಲ. ನಾಳೆ ರಾತ್ರಿಗೇ ಆಯಿತು. ಏನು ಮಾಡುವುದೇ ಅಮ್ಮ? ನಾಲ್ಕೈದು ದಿನವಾಯಿತು ಈ ಕಾಗದ ಬರೆದು. ಇಷ್ಟರೊಳಗೆ ಅಲ್ಲಿ ಏನೇನು ನಡೆಯಿತೋ! ಇವನೊಬ್ಬ ಶುದ್ಧ ಮೂಢ. ಎರಡು ವರ್ಷದಿಂದಲೂ ನಾನು ಹೋಗಿ ಬಾರೋ ಹೋಗಿ ಬಾರೋ ಎಂಧು ಹೇಳುತ್ತಲೇ ಇದ್ದೆ. ಬರೇ ಸೋಮಾರಿ. ಹಿರಿಯರು ಕೂಡಿಸಿಟ್ಟಿರದಿದ್ದರ ಹ್ಯಾಗೆ ಬಾಳುವೆ ನಡೆಸುತ್ತಿದ್ದನೋ! ನಾನೂ ಎಷ್ಟೋ ಮಂದೀನ ನೋಡಿದ್ದೇನೆ, ಇವನಂಥ ಸೋಮಾರಿಯನ್ನು ಕಂಡಿಲ್ಲ. ಸಾಲದ್ದಕ್ಕೆ ವೇದಾಂತ ವಿಚಾರ ಬೇರೆ. ಪರಬ್ರಹ್ಮ ಸ್ವಾಮಿಯೊಬ್ಬ!'' ಎಂದು ಹೇಳುತ್ತಿದ್ದಾಗ, ಲಕ್ಷ್ಮಮ್ಮನ ಕೈಮಗು ಅಳತೊಡಗಲು, ಎದ್ದು ಅತ್ತ ಹೋದರು.

* * *

ಲಕ್ಷ್ಮಿಗೆ ಪ್ರಾಣಭಯವೇನೂ ಇಲ್ಲವೆಂದೂ ಹೊಸದಾಗಿ ಧಿಡುಕ್ಕೆನಿಸ ಬಹುದಾದಂಥ ಸಂಗತಿ ಯಾವುದನ್ನೂ ಹೇಳಬಾರದೆಂತಲೂ ಡಾಕ್ಟರು ಖಂಡಿತವಾಗಿ ಎಚ್ಚರಿಕೆ ಕೊಟ್ಟಿದ್ದರು. ಶಾಸ್ತ್ರಿಗಳು ಪನಂಗುಡಿಗೆ ಹೊರಟರು.

ಅವರು ಪನಂಗುಡಿಗೆ ಮುಟ್ಟುವ ಮುನ್ನವೇ ಆ ದೀಕ್ಷಿತನು ಕಾರೈಕ್ಕಾಲಿಗೋ, ಪುದುಚ್ಚೇರಿಗೋ ಓಡಿಹೋಗಿರುವನೆಂಬ ವಾರ್ತೆ ಅವರಿಗೆ ಸಿಕ್ಕಿಬಿಟ್ಟಿತು. ಮಾಂಗುಡಿ ರಾಜು ಶಾಸ್ತ್ರಿಗಳು ಏನೋ ಕಾರ್ಯಾರ್ಥ ವಾಗಿ ಮಾಯವರಂಗೆ ಬಂದವರು, ಮಾಯವರಂ ಜಂಕ್ಷನ್ನಿನಲ್ಲಿ ಇವರನ್ನು ಸಂಧಿಸಿ, ದೀಕ್ಷಿತನು ಸಂಸಾರ ಸಮೇತನಾಗಿ ಎಲ್ಲಿಗೋ ಓಡಿಹೋಗಿರುವ ನೆಂದು ತಿಳಿಸಿದರು.

ಶಾಸ್ತ್ರಿಗಳು ಏನು ಮಾಡುವುದೆಂದು ತಿಳಿಯದೆ ದಂಗಾಗಿ ಹೋದರು. ಪನಂಗುಡಿ ವಾಸಿಗಳಾದ ಅನೇಕರಿಗೆ ಈ ಸಂಗತಿಯೇ ಗೊತ್ತಿರಲಿಲ್ಲ. ತಿಳಿದಿದ್ದ ಕೆಲವರು ''ಇವರಿಗೆ ಹೇಗೆ ತಿಳಿದಿದ್ದೀತು? ತಿಳಿದು ಬಂದರೋ, ಅಕಸ್ಮಾತ್ತಾಗಿ ಬಂದರೊ?'' ಎಂದು ಮಾತಾಡಿಕೊಂಡರು. ಮಣೆಗಾರರೂ ತಮಗೊಂದೂ ತಿಳಿಯಲಿಲ್ಲ ಎಂದರು.

ಶಾಸ್ತ್ರಿಗಳಿಗೆ ಭೂಮಿಯೇ ಸುತ್ತಿಕೊಳ್ಳುವಂತೆ ತೋರಿತು. ದಸ್ತಾವೇಜುಗಳನ್ನು ತೆಗೆದೊಯ್ಯದೆ ಪನಂಗುಡಿಯಲ್ಲಿಯೇ ಬಿಟ್ಟು ಹೋದುದಕ್ಕೆ ತಮ್ಮನ್ನು ತಾವೇ ಬೈದುಕೊಂಡರು. "ಆಹಾಹಾ! ಎಂಥ ಮೋಸ! ಫೋರ್ಜರಿ!....ಎಲ್ಲಿಗೆ ಓಡಿದ? ಸಿಲೋನೋ ಬರ್ಮಾವೋ? ಸಿವಿಲ್ ಜೈಲಾಗಿರುತ್ತಿದ್ದರೆ ನಮ್ಮನ್ನವನ್ನೇ ತಿಂದು ಹೋಗುತ್ತಿದ್ದ. ಇದು ಕ್ರಿಮಿನಲ್ ಗುಹ್ನೆಯಾಯಿತಲ್ಲ! ಈಗಲೇ ಪೋಲೀಸಿಗೆ ತಿಳಿಸಿಬಿಡಬೇಕು. ಮನೆಯನ್ನು ತೆರೆದು ನೋಡೋಣ. ಪಾತ್ರೆ–ಗೀತ್ರೆ–ಕಬ್ಬಿಣದ ಪೆಟ್ಟಿಗೆ ಎಲ್ಲವನ್ನೂ ಹೊಡೆದುಕೊಂಡು ಹೋಗಿದ್ದಾನು. ಬಾಗಿಲು–ಕಂಬ ಎಲ್ಲಕ್ಕೂ ಗಿರಾಕಿ ಮಾಡಿದ್ದಾನು. ದೀಕ್ಷಿತನಂತೆ, ದೀಕ್ಷಿತನೋ ರಾಕ್ಷಸನೋ! ಸುಖವಾಗಿ ಮನೆಯಲ್ಲಿರೋದು ಬಿಟ್ಟು ನನ್ನ ವಿಧಿ ಮದರಾಸಿಗೆ ಒಯ್ದಿತು. ಮದರಾಸಿಗೆ ಹೋದುದಕ್ಕೆ ಒಂದು ಹುಡುಗೀನೂ ಹುಡುಗನನ್ನೂ ಬಲಿ ಕೊಟ್ಟಾಯಿತು. ಕೈಯಲ್ಲಿದ್ದ ದುಡ್ಡನ್ನೆಲ್ಲಾ ಕರಿಮಾಡಿ. ಸ್ಕೂಲಿಗೂ, ಡಾಕ್ಟರಿಗೂ, ಮನೆ ಬಾಡಿಗೆಗೂ ಸುರಿದು ಸುರಿದು ಹಾಳುಮಾಡಿದ್ದೇ ಸರಿ. ಅಳಿಯನೊಬ್ಬ ಸೀಮೆಗೆ ಹೋದದ್ದೂ ನಾಟಕವಾಡಿದ್ದೂ ಬೇರೆ. ಈಗ ಎಳೆಯ ಅಳಿಯನಿಗೆ ತೆರೆ ಎತ್ತಿದೆ. ವೇಷ ಬಂದು ಆಡಬೇಕಾದ್ದೇ ಬಾಕಿ. ಇವನೇನೋ ದೊಡ್ಡ ಹಣಗಾರನ ಹುಡುಗಾ ಅಂತ ಹುಡುಗೀನ ಕೊಟ್ಟೆ. ಉದ್ಯೋಗವಿಲ್ಲ. ಮೂರನೇ ಅಳಿಯ ಇನ್ನು ಬರಲಿಕ್ಕಿದ್ದಾನೆ. ಅವರೆಡೆಯಲ್ಲಿ ಇದೊಂದು! ಹಾ ವಿಧಿಯೇ ವಿಧಿ!...." ಎನ್ನುತ್ತಾ ಬಾಗಿಲನ್ನು ತೆರೆದರು ಪತಂಜಲಿ ಶಾಸ್ತ್ರಿಗಳು.

# ಉದ್ಯೋಗದ ಬೇಟೆ

ರಂಗನಾಥನು ಕಲಿಯುವಾಗಲೇ ಶಾರ್ಟ್‌ಹ್ಯಾಂಡ್ ಟೈಪ್‌ರೈಟಿಂಗ್ ಮೊದಲಾದ ಪರೀಕ್ಷೆಗಳಲ್ಲಿಯೂ ಪಾಸಾಗಿದ್ದನು. ಆದುದರಿಂದ ಮೇಲಿನ ಓದು ಬೇಡವೆಂದೂ, ಕೆಲಸಕ್ಕೆ ಹೋಗುವುದೇ ಒಳ್ಳೆಯದೆಂದೂ ಶಾಸ್ತ್ರಿಗಳು ಅಭಿಪ್ರಾಯಪಟ್ಟರು. ಅನೇಕವಾಗಿ ಹಲವು ಕುಟುಂಬಗಳಲ್ಲಿ ಕಡೆಗೆ ಹುಟ್ಟುವ ಮಕ್ಕಳಿಗೆ ಹೀಗೆಯೇ ಏನಾದರೊಂದು ತಡೆ ಬಂದೇ ಬರುತ್ತದೆ. ಏನೋ ಉದ್ಯೋಗದಲ್ಲಿ ಮೇಲೆ ಮೇಲೆ ಏರುವ ಕೆಲವರ ಹೊರತು, ಹೆಚ್ಚಾಗಿ ಕಡೇ ಪಂಕ್ತಿಯ ಮಕ್ಕಳ ಪಾಡು ಕಷ್ಟದಲ್ಲೇ ಮುಟ್ಟುತ್ತದೆ.

ನಮ್ಮ ರಂಗನೂ ಈ ಬಗೆಯ ಪರಮ ಸಂಕಟದ ನೆಲೆಯಲ್ಲಿಯೇ ಕೆಲಸ ಹುಡುಕಾಡುತ್ತಿದ್ದನು. ಬಾಯಲ್ಲಿದ್ದ ತೌಡೂ ಹೋಗಿ, ಒಲೆಯಲ್ಲಿದ್ದ ಬೆಂಕಿಯೂ ಆರಿದ ಕತೆಯಂತೆ, ಹಣವೂ ಹೋಗಿ ರೋಗವೂ ಬಂದು, ಕುಟುಂಬವು ತತ್ತ್ತಳಿಸಲಾರಂಭಿಸಿತ್ತು. ದೊಡ್ಡ ಕಂಪೆನಿಯಿಂದ ಸಣ್ಣ ಸೆಟ್ಟಿ ಅಂಗಡಿಯವರೆಗೂ, ಎಲ್ಲಿ ಕೆಲಸ ಸಿಕ್ಕಿದರೆ ಅಲ್ಲಿಗೆ ಹೋಗಲು ತಯಾರಾಗಿದ್ದನು ರಂಗ. ಮೂವತ್ತು ರೂಪಾಯಿ ಸಿಕ್ಕಿದರೂ ಸಾಕು. ಹಾಲಿನ ಖರ್ಚಿಗಾದರೂ ಒದಗೀತು. ಆದರೆ ಕೆಲಸ ಕೊಡುವವರೇ ಇಲ್ಲ.

ರಾಜುಗೂ ಕೆಲಸವಿಲ್ಲ. ಎಲ್ಲಿಗೆ ಅಪ್ಲಿಕೇಶನ್ ಹಾಕಿದರೂ ಬ್ರಾಹ್ಮಣನೆ ಅಬ್ರಾಹ್ಮಣನೆ? ಎಂಬ ಪ್ರಶ್ನೆ. ಅಪ್ಲಿಕೇಶನ್ನಿಗೇ ಐವತ್ತು ರೂಪಾಯಿ ಟಪ್ಪಾಲು ಖರ್ಚಾಗಿದ್ದೀತು.

"ಕೆಂಪು ಮುಖದವರಿಗೆಲ್ಲಾ ಹೆಣ್ಣು ಟೈಪಿಸ್ಟುಗಳೇ ಬೇಕಂತೆ. ಉಳಿದವರಿಗೆಲ್ಲಾ ಅಬ್ರಾಹ್ಮಣರಾಗಬೇಕಂತೆ. ಇನ್ನು ಮೇಲೆ ಅಪ್ಲಿಕೇಶನ್ ಹಾಕುವುದಾದರೆ, ಜನಿವಾರ ಕಡಿದುಕೊಂಡು ರಂಗಾಸಾಮಿ ನಾಯಿಡು ಎಂದು ಹಾಕಬೇಕು" ಎಂದು ಬಹಳ ಬೇಸರದಿಂದ ರಂಗನೆಂದ.

ಬಡಿಸಿಕೊಂಡಿದ್ದ ಸುಂದರಿ "ಹಾಗಾದರೂ ಮಾಡಿ ನೋಡಬಾರದೊ? ಫಲಿಸಿದರೇ ಇದೇ ಯುಕ್ತಿ ನಿನ್ನ ಸಣ್ಣ ಭಾವನಿಗೂ ಕಲಿಸುವುದು!" ಎಂದಳು.

"ಅದೊಂದೀಗ ಉಳಿದಿದೆ. ಅವರಿಗೆ ಅವರ ತಂದೆಯುವರ ಶಿಫಾರಸು ಬಲವಾಗಿದ್ದರೂ ಕೆಲಸ ಸಿಕ್ಕಲಿಲ್ಲವೆಂದರೆ ಆಶ್ಚರ್ಯವೇ. ಅವರಿಗೇನು ಇವತ್ತಿಲ್ಲದಿದ್ದರೆ ನಾಳೆಯಾದರೂ ಕೆಲಸ ಸಿಕ್ಕೀತು. ನಾನೇ ಗತಿಗೇಡಿ!" ಎಂದನು ರಂಗ.

ಅದುವರೆಗೆ ಮೌನವಾಗಿದ್ದ ರಾಜು,—"ನನಗೆ ಮಾತ್ರ ಯಾರು ಕೆಲಸ ಇದೇ ಅಂತ ಕರೆಯುತ್ತಾರೆ? ಏನಾದರೂ ಒಳ್ಳೆ ವ್ಯಾಪಾರಮಾಡುವುದಾದರೆ, ತಾನು ಹಣ ಹಾಕುತ್ತೇನೇಂತ ತಂದೆ ಹೇಳುತ್ತಾರೆ. ಎಂಥ ವ್ಯಾಪಾರ? 'ಪೆಟ್ರೋಲ್ ಬಂಕ್' ಇಡೋಣವೆಂದು ನೋಡಿದೆ. ಊರೊಳಗೆ ಎಲ್ಲೆಲ್ಲಿಯೂ ಬಸ್ಸೂ ಕಾರೂ ತುಂಬಿದೆ. ಆದರೆ ಅವರಿಗೆ ಸಾವಿರ ಲೆಕ್ಕದಲ್ಲಿ ಸಾಲವಾಗಿ ಕೊಟ್ಟುಬಿಟ್ಟು, ತಿಂಗಳೆಲ್ಲಾ ಪುಸ್ತಕ ಕೊಟ್ಟು ಆಳನ್ನು ಕಳುಹಿಸಿ ಆಗಾಗ ಐದೂ ಹತ್ತೂ ವಸೂಲಿಸುವ ಆ ಕಷ್ಟ ಯಾರು ತಾಳ್ಯಾರು? ಇಲ್ಲದಿದ್ದರೆ ಎರಡು ಮೂರು ಕಾರು ತೆಗೆದುಕೊಂಡು ಟ್ಯಾಕ್ಸಿ ಇಡಲೋ ಎಂದು ಯೋಚಿಸಿದೆ. ಅಷ್ಟು ಹಣ ಹಾಕಿ ನಡೆಸಲಿಕ್ಕೆ ಡ್ರೈವರುಗಳು ಮೋಸಮಾಡದೆ ಹಣವನ್ನು ನಮ್ಮ ಹತ್ತರ ಕೊಟ್ಟರೆ ಉಂಟು, ಇಲ್ಲದಿದ್ದರೆ ಹಾಕಿದ್ದೆಲ್ಲಾ ಹೋಗಿಬಿಟ್ಟೀತು. ಮತ್ತೆ ಯಾವ ಉದ್ಯೋಗ ತಾನೇ ಮಾಡುವುದು? ಅದಕ್ಕಿಂತ ಮೋಟಾರು ಡ್ರೈವರಾಗಿ ಹೋಗುವುದೇ ಉತ್ತಮ. ಅದರಿಂದ ಅಗೌರವವೇನು ಬಂತು? ಕೈಕೆಲಸಗಳಿಗೆ ತಾನೇ ಈ ಕಾಲದಲ್ಲಿ ಹೆಚ್ಚಳ?" ಎಂದನು.

"ಅದೊಂದೇ ಕೊರತೆ. ಜಮೀನುದಾರರ ಮಗಳು, ಪ್ರೊಫೆಸರರ ಮನೆಯ ಸೊಸೇ ಎಂಬುದೆಲ್ಲಾ ಹೋಗಿ, ಮೋಟಾರು ಡ್ರೈವರನ ಹೆಂಡತಿ ಎಂದೇ ಇನ್ನುಮೇಲೆ ಹೇಳಿಕೊಳ್ಳಬೇಕಾಯಿತು, ಚೆನ್ನಾಗಿದೆ. ಬಹಳ ಒಳ್ಳೇ ಯೋಚನೆ. ಹೇಳಿದ ಬಾಯಿಗೆ ಸಕ್ಕರೆ ಹಾಕಬೇಕು" ಎಂದಳು ಸುಂದರಿ.

"ಅದಿರಲಿ ರಂಗಾ, ನೀನೇನೋ ಹೇಳಬಂದೆಯಲ್ಲಾ? ಅದೇನು?" ಎಂದು ಕೇಳಿದನು ರಾಜು.

"ಇನ್ಶೂರೆನ್ಸ್ ಏಜೆಂಟು ಕೆಲಸ ಒಪ್ಪಿಕೊಳ್ಳಬೇಕಂತ ಇದ್ದೇನೆ. ಸುಲಭ ಸಾಧ್ಯವಾದ ವೃತ್ತಿ. ತಿಂಗಳಿಗೊಂದು ಹತ್ತು ಮಂದೀನಾದರೂ ಹಿಡಿದರೆ ನಮ್ಮ ಅದೃಷ್ಟ ಹೇಗಾಗುವುದೋ ನೋಡುವ" ಎಂದನು.

"ಏನಪ್ಪಾ, ಅದಕ್ಕೆ ಅಪರಿಮಿತವಾದ ತಾಳ್ಮೆಯೂ, ಸಾಮರ್ಥ್ಯವೂ, ವಾಕ್ಚಾತುರ್ಯವೂ ಬೇಕಲ್ಲಾ? ಅದಿಗೆ ತಕ್ಕ ಆಟ ಆಡಬೇಕಲ್ಲಾ? ಒಬ್ಬನನ್ನು ಇನ್ಶೂರು ಮಾಡಗೊಳಿಸುವುದರೊಳಗೆ ಏಳು ಜೋಡು ತೇದು ಹೋದೀತು. ಸೈಕಲ್ ಬಿಡಬೇಕು. ದಾರಿಯಲ್ಲಿ ಯಾರನ್ನು ಕಂಡರೂ 'ಏನು ಸ್ವಾಮಿ, ದಯವಿಲ್ಲ' ಎನ್ನಬೇಕು. ದರ್ಜೀ, ನಾಬೀ ಮೊದಲು ಗೊಂಡು, ತರಕಾರೀ ಮಾರುವ ಕಣ್ಣಮ್ಮನವರೆಗೆ ಎಲ್ಲರಿಗೂ ಗೊಡ್ಡು ಸಲಾಮು ಹಾಕಬೇಕು. ಹೀಗೆಲ್ಲ ಶತಾವಧಾನ ಮಾಡಿದರೆ ಒಬ್ಬನನ್ನು ಹಿಡಿಯಬಹುದು. ನಿನಗೋ ಕೆಪ್ಪದೆಗೊಂದು ಕೊಟ್ಟರೆ ಕೂಡ ಸ್ವರಮಾಡಿ ಅಳಲಿಕ್ಕೆ ಬಾರದು. ನೀನೆಲ್ಲಿ, ಇನ್ಶೂರೆನ್ಸ್ ಏಜೆಂಟ್ ಎಲ್ಲಿ?" ಎಂದನು ರಾಜು.

"ಹೌದು. ರಂಗನಿಂದಾದೀತೊ? ನಿಮ್ಮ ಹಾಗೆ ಹರಟೇಮಲ್ಲರಾಗಿದ್ದವರೇ ಅಂಥ ಕೆಲಸಕ್ಕೆ ಸರಿ" ಎಂದು ಕುಚೇಷ್ಟೆಯಾಗಿ ಸುಂದರಿ ನಕ್ಕಳು.

"ರಂಗಾ, ನೋಡೋ! ನೋಡೋ! ನನ್ನನ್ನು ಹರಟೇಮಲ್ಲಾ ಅನ್ನುತ್ತಾಳೇ! ಏನು ಧೈರ್ಯ! ಹುಂ, ಹೋಗಲಿವಳು. ನಾವು ನಾಳೆಯೇ ನಮ್ಮ ಕಾರ್ಯವನ್ನು ಆರಂಭಿಸಿಬಿಡೋಣ. ನೀನು ನಿನಗೆ ತಿಳಿದವರನ್ನು ಹಿಡಿ. ನಾನೂ ನನಗೆ ತಿಳಿದ ದರ್ಜಿಗಳು, ನಾಬಿಗಳು, ಅಡಿಗೆಯವರು, ಪಾಟಕರು ಹೀಗೆ ಒಬ್ಬೊಬ್ಬರನ್ನಾಗಿ ಹಿಡಿದು ನೋಡುತ್ತೇನೆ" ಎಂದನು ರಾಜು.

* * *

"ಸುಂದರಿ, ಭಾವನೂ ನಾನೂ ಅಂದು ಅಷ್ಟು ತರ್ಕಮಾಡಿದೆವಲ್ಲ? ಆ ಆಸೆಯನ್ನೂ ನೋಡಿಯಾಯಿತು. ಒಂದು ಹೊಸ ಇನ್ಶೂರೆನ್ಸ್ ಕಂಪೆನಿಯವರು, ತಿಂಗಳಿಗೆ ಐವತ್ತು ರೂಪಾಯಿಯಿಂದ ಇನ್ಶೂರರವರೆಗೆ ಸುಲಭವಾಗಿ ಸಂಪಾದಿಸಬಹುದೆಂತ ಪ್ರಕಟನೆ ಕೊಟ್ಟಿದ್ದರು. ಅಪ್ಲಿಕೇಶನ್ ಬರೆದು ಖುದ್ದಾಗಿ ಹೋದೆ. ಮೊದಲು ಹೋದಾಗ ಆಫೀಸು ಹತ್ತು ಗಂಟೆಗೆ ತೆರೆಯುತ್ತಾರೆಂದ ಒಬ್ಬ ಸಣ್ಣ ಹುಡುಗ. ಮನೆಯ ಬಾಗಿಲಲ್ಲಿ ಹೂವಿನ ತೊಟ್ಟಿಗಳನ್ನೆಲ್ಲ ಇಟ್ಟು ಬಹಳ ದಡಬಡವಾಗಿ ಅಲಂಕಾರವಾಗಿತ್ತು ಆ ಮನೆ. ಬಿಲ್ಲೆಯ ಸೇವಕ ಫಳಫಳಿಸುವ ಬಿಲ್ಲೆ ಹಾಕಿಕೊಂಡಿದ್ದ...."

ಸುಂದರಿ ತಾಳ್ಮೆಗೆಟ್ಟು, "ನೀನೇನು, ಸಂಗತಿ ಏನೂಂತ ಹೇಳುತ್ತೀಯಾ? ಕತೆ ಹೇಳುತ್ತೀಯಾ?" ಎಂದಳು.

ಹೊರಗೆ ಹೋಗಿದ್ದ ರಾಜುವೂ, ಆಗ ಬಂದು,—"ಏನು ರಂಗಾ? ಹೋದ ಕೆಲಸ ಹಣ್ಣಾ ಕಾಯಾ?"

"ಅದನ್ನು ಹೇಳುವಷ್ಟರಲ್ಲಿ ಅವಸರ ಪಡುತ್ತಾಳೆ. ಒಳಗೆ ಹೋದೆ. ಗುಮಾಸ್ತರು ನಾಲ್ವರು. ಕಾರ್ಯಸ್ಥ ಒಬ್ಬ. ಇವರೆಲ್ಲರೂ ಬೇರೆ ಬೇರೆ ಕೋಣೆಯೊಳಗೆ ಕುಳಿತುಕೊಂಡಿದ್ದರು. ನೆಟ್ಟಗೆ ಕಾರ್ಯಸ್ಥನಿಗೆ ಅಪ್ಲಿಕೇಶನ್ ಕೊಟ್ಟೆ. ಅವನು, 'ರೊಕ್ಕ ಜಾಮೀನೋ ವ್ಯಕ್ತಿ ಜಾಮೀನೊ?' ಎಂದು ಕೇಳಿದ. 'ನಾಳೆ ಬಂದು ತಿಳಿಸುತ್ತೇನೆ' ಎಂದಂದು ಮೆಲ್ಲಗೆ ಜಾರಿಬಿಟ್ಟೆ."

"ಎಷ್ಟು ಜಾಮೀನು ಕಟ್ಟಬೇಕಂತೆ?'

"ಐನೂರು"

"ಚೆಂದಾಗಿದೆ, ಸಂಬಳ ಎಷ್ಟಂತೆ?"

"ಮೂವತ್ತೈದು"

"ಮತ್ತೆ ಒಪ್ಪಿಕೊಳ್ಳಬಹುದಿತ್ತಲ್ಲಾ?"

"ಅದೇ ಹೇಳುವುದು. ಬೆಳಗಿಂದ ಬೆಳಗೆ ಕತೆ ಕೇಳಿ ಸೀತೆಗೆ ರಾಮ ಚಿಕ್ಕಪ್ಪನೋ ಎಂದನಂತೆ. ಜಾಮೀನಿಗೆ ಹಣ ಎಲ್ಲಿದೆ? ಅಷ್ಟು ಹಣ ಇದ್ದರೆ ಅಡಿಕೆ ವೀಳ್ಯದಂಗಡಿಯಾದರೂ ಇಡಬಹುದಲ್ಲ? ಜಾಮೀನಿಲ್ಲದ ಕೆಲಸಗಳಿಗೆ ಎಷ್ಟೋ ಎಡರುಗಳನ್ನಿಟ್ಟಿದ್ದಾರೆ. ಅಮ್ಮ ಮೊದಲಿನ ಹಾಗಿದ್ದರೆ ಏನೋ ಮಾಡುತ್ತಿದ್ದಳು. ಅಪ್ಪನ ಹತ್ತಿರ ಹೇಳಲಾರಂಭಿಸುವಾಗಲೇ ಉರಿದುರಿದು ಬೀಳುತ್ತಾರೆ. ಇನ್ನೊಂದು ಸಂಗತಿ. ಆ ಗುಮಾಸ್ತರಲ್ಲಿ ಒಬ್ಬನು ನನ್ನೊಂದಿಗೆ ಓದಿದ ಹುಡುಗ. ನಿತ್ಯಾನಂದ ಮೊದಲಿಯಾರರ ಮಗ ಶಿವಪಾದಂ. ಅವನನ್ನು ಪ್ರತ್ಯೇಕವಾಗಿ ಕಂಡು ವಿಷಯವನ್ನು ವಿಚಾರಿಸಿದೆ. ಅವನು ಹೀಗೆ ಹೇಳಿದ:

"ಕಂಪೆನಿ ಏರ್ಪಾಡೆಲ್ಲಾ ತುಂಬ ಚೆನ್ನಾಗಿಯೇ ಇದೆ. ನಾನು ಬಂದು ಮೂರು ತಿಂಗಳಾಗಿಯೂ, ಭಾಗಸ್ಥರು ಸೇರಿದ್ದಾರೆಯೇ ಹೊರತು 'ಪಾಲಸಿದಾರರು' ಒಬ್ಬರು ಕೂಡ ಸೇರಲಿಲ್ಲ. ತಿಂಗಳು ಕಂತು ಒಂದೇ

ರೂಪಾಯಿ. ಹದಿನೈದನೇ ವರ್ಷದಲ್ಲಿ ಐನೂರು ರೂಪಾಯಿ ಕೊಟ್ಟು ಬಿಡುತ್ತಾರೆ. ನಡುವೇ ಸತ್ತರೂ ಅದೇ ಮೊಬಲಗು ಕೊಡುತ್ತಾರೆ. ತುಂಬಾ ಲಾಭಕರವಾದ ಏರ್ಪಾಟೇನೋ ನಿಜ. ಆದರೆ ಆರಂಭ ನಿಧಿ ಒಂದು ಕಾಸು ಕೂಡ ಇಲ್ಲದೆ ಆರಂಭಿಸಿಬಿಟ್ಟಿದ್ದಾರೆ. ನಾಲ್ಕು ಗುಮಾಸ್ತರ ಜಾಮೀನು ರೊಕ್ಕ ಎರಡು ಸಾವಿರವಾಗುತ್ತದಷ್ಟೆ? ಅದರಿಂದ ಒಂದಾರು ತಿಂಗಳು ಮನೆ ಬಾಡಿಗೆ, ಮೇಜು, ಕುರ್ಚಿಗಳ ಬಾಡಿಗೆ, ಸೇವಕರು. ಗುಮಾಸ್ತರು ಇವರನ್ನೆಲ್ಲಾ ನೋಡಿಕೊಂಡರೆ, ಅಷ್ಟರೊಳಗೆ ಹೇಗಾದರೂ ಶ್ರಮಪಟ್ಟು ಇನ್ನೂರು ಮಂದಿಯನ್ನು ಸೇರಿಸಿಬಿಟ್ಟರೆ, ನಂತರ ಕಂಪೆನಿ ನಿರಂತರವಾಗಿ ಕೆಲಸಮಾಡೀತು. ಆದರೆ ಅದುವರೆಗೆ ಈಗಿನ ಸ್ಥಿತಿ ನೋಡಿದರೆ—ಕೊಂಚ ಹಾಗೆ ಹಾಗೇ ಸರಿ. ಅಷ್ಟರೊಳಗೆ ಒಬ್ಬ ಗುಮಾಸ್ತನು ಅವಸರಪಟ್ಟು ಹಣವನ್ನು ಪಡೆದುಕೊಂಡು ಓಡಿಹೋಗಿಬಿಟ್ಟ. ಅದರಲ್ಲೇನು ಲಾಭ? ಕೆಲಸ ಸಿಕ್ಕುವುದೇ ಕಷ್ಟವಾಗಿರುವ ಕಾಲ. ಕೂಡಿದ್ದ ವರೆಗೆ ನಾವೂ ಪ್ರಯತ್ನಮಾಡಿ ನೋಡುವಾ ಎಂತಲೇ ನಾನೂ ದಿನಾ ಬಂದು ಬಂದು ಹೋಗುತ್ತೇನೆ. ಪ್ರತಿದಿನವೂ ನಾವು ಬಂದು ಕುರ್ಚಿಗಳನ್ನು ಅಲಂಕರಿಸಿಕೊಳ್ಳಬೇಕಾದ್ದು; ಏನಾದರೂ ಕಾಗದವಿದ್ದರೆ ಉತ್ತರ ಬರೆಯುವುದು. ಒಂದೂ ಇಲ್ಲದಿದ್ದರೆ ಟೈಪ್‌ರೈಟರ್ ಯಂತ್ರ ಸರಿಯಾಗಿದೆಯೋ ನೋಡಲಿಕ್ಕೆ ಸ್ವಲ್ಪ ಹೊತ್ತು ಏನಾದರೂ ಹೊಡೆಯುವುದು. ಕಳೆದ ವಾರವೆಲ್ಲಾ ಕುಳಿತುಕೊಂಡು ಏನಾದರೂ ಕತೆಯೋ ಹರಟೆಯೋ ಬರೆಯುವಾ ಅಂತ ಯೋಚಿಸಿ ಏನೋ ಮನಸ್ಸಿಗೆ ತೋರಿದಹಾಗೆ ಬರೆದಿದ್ದೇನೆ. ಇಕೋ, ಈ ಕಟ್ಟಿನೊಳಗಿರುವುದನ್ನು ಆರಿಸಿಕೊಂಡು, ಯಾವ ಪತ್ರಿಕೆಗಾದರೂ ಕಳುಹಿಸಬಹುದೋ ನೋಡು" ಎಂದಂದು ನನ್ನ ಕೈಯಲ್ಲಿ ಒಂದು ದೊಡ್ಡ ಕಟ್ಟನ್ನ ಕೊಟ್ಟನು" ಎಂದು ನಿಲ್ಲಿಸಿದನು ರಂಗ.

"ಎಲ್ಲಿ? ಎಲ್ಲಿ? ಅದನ್ನಿತ್ತ ಕೊಡು ನೋಡೋಣ" ಎಂದಳು ಸುಂದರಿ.

"ನನ್ನ ಕೈಗೆ ಕೊಡೋ" ಎಂದ ರಾಜು.

"ಸರಿ ಸರಿ. ನಾನು ಓದಿಯಾಗಲಿ" ಎಂದಂದು ರಂಗನು ಎದ್ದನು.

* * *

ಸಾಯಂಕಾಲ ಸುಮಾರು ನಾಲ್ಕು ಗಂಟೆ ಇದ್ದೀತು. ಶ್ಯಾಮಳೆ ಹೊರಬದಿಯ ಕೋಣೆಯಲ್ಲಿ ಏನೋ ಬಣ್ಣದ ನೂಲುಗಳನ್ನಿಟ್ಟುಕೊಂಡು 'ಎಂಬ್ರಾಯಿಡರಿ' ಕೆಲಸ ಮಾಡಿಕೊಂಡಿದ್ದಳು. ಬೀದಿಯಲ್ಲಿ ಹೋಗಿಬರುವ ಹೆಂಗುಸರನ್ನು ನೋಡಿದಾಗ ಅವಳಿಗೆ ತನ್ನ ಸ್ಥಿತಿಯ ನೆನಪಾಗಿ, ಹೀಗೆ ಯೋಚಿಸಲಾರಂಭಿಸಿದಳು:—

"ಅಕ್ಕ ಒಳ್ಳೆ ಅದೃಷ್ಟವತಿ. ಕಳೆದ ವರುಷದವರೆಗೂ ಶಾಲೆಗೆ ಹೋಗುತ್ತಿದ್ದಳು. ಸಂಗೀತಮಾಸ್ತರೂ ಬರುತ್ತಿದ್ದರು. ನಮಗೋ ಅಲಂಕಾರ ಮುಗಿವ ಮೊದಲೇ ಅದೃಷ್ಟ ಸುರಿದುಬಿಟ್ಟತು. ಭಾವ ಕೂಡಾ ಸಮರ್ಥರು. ಅವರಿಗೆಲ್ಲಾ ಚಿಂತೆ ಇಲ್ಲ. ನಮಗೊಂದು ಡಿ.ಎಂ.ಸಿ. ಪುಸ್ತಕ ತೆಗೆಸಿಕೊಡಲಿಕ್ಕೂ ಅಪ್ಪನಿಂದ ಸಾಧ್ಯವಿಲ್ಲ. ಅನಾವಶ್ಯಕ ಅನುತ್ತಾರೆ. ಮನೆಯಲ್ಲಿ ಹೊಲಿಗೆ, ಹಾಡು ಏನಾದರೂ ಕಲಿಯುವ ಅಂದರೂ ಸಾಧ್ಯವಿಲ್ಲ. ನನಗೊಂದೂ ಇಲ್ಲ! ಒಂದೂ ಬೇಡ. ಶಾಲೆ ಬೇಡ. ಹಾಡು ಬೇಡ. ಹೊಲಿಗೆ ಅನಾವಶ್ಯಕ ಖರ್ಚು. ನಾನು ಕೇಳಿದರೆ ಎಲ್ಲಾ ಅನಾವಶ್ಯಕ ಅಂತಾರೆ. ಬಾಗಿಲಿಗೆ ಕಟ್ಟು ಕೊಳವೆಗಳೂ, ಮಣಿಗಳೂ ಸುಂದರಿಗೆ ರೂಪಾಯಿ ರೂಪಾಯಿ ಸುರಿದು ತಂದು ಕೊಡಲಿಲ್ಲವೊ? ಇದು ಬಾಯಿ ಇರುವವರಿಗೇ ಕಾಲ. ಹೋಗಲಿ. ಅಪ್ಪ ತುಂಬ ಕಷ್ಟಪಡುತ್ತಾರಲ್ಲಾ, ನಾವೊಂದೂ ಕೇಳಬಾರದಂತ ನೋಡಿದರೆ, ಎಂಟಾಣೆಗೆ ಕೂಡ ಲೆಕ್ಕ ಹಾಕುತ್ತಾರೆ. ಅಜ್ಜಿಯೋ ಬೆಳಗಾದರೆ ಸರಿ. ಮದುವೇ ಮದುವೇ ಅಂತ ಆರಂಭಿಸಿಬಿಡುತ್ತಾರೆ. ಹಣವಿಲ್ಲದ ಸಮಯದಲ್ಲಿ ಏನು ಮದುವೆ ಬೇಕಾಗಿದೆ? ಏನು ಕಷ್ಟವೋ! ರಂಗನೂ ಪಾಪ ಏನೇನೋ ಮಾಡುತ್ತಾನೆ. ಮೈಯಲ್ಲಿಯೂ ಸೊರಗಿಹೋಗಿ ಬಿಟ್ಟ. ಒಬ್ಬೊಬ್ಬರಿಗೆ ಒಂದೊಂದು ವಿಧವಾದ ಚಿಂತೆ...."

ಹೀಗೆ ಯೋಚಿಸುತ್ತಿದ್ದಾಗ ಅವಳಿಗೂ ತಿಳಿಯದೆ, ಹೊಲಿಗೆ ಕೆಲಸ ಮಾಡುತ್ತಿದ್ದ ಬಟ್ಟೆಯ ಮೇಲೆ ಅವಳ ಕಂಬನಿ ಬೊಟ್ಟು ಬಿದ್ದಿತು. ತನ್ನನ್ನಾರಾದರೂ ಕಂಡರೇನೋ ಎಂದುಕೊಂಡು ಸುತ್ತುಮುತ್ತೂ ಒಮ್ಮೆ ನೋಡಿಕೊಂಡಳು.

# ಜೀವರಕ್ಷಕ

ರಾತ್ರಿ ಒಂದು ಗಂಟೆಯಾಗಿದ್ದೀತು. ಎಲ್ಲೆಲ್ಲಿಯೂ ನೆರೆ ನೆಮ್ಮದಿಯಾಗಿತ್ತು. ಬೆಳುದಿಂಗಳು ಹಚ್ಚಹಗಲಂತೆ, ಚೆಲ್ಲಿತ್ತು. ಬೆಳುದಿಂಗಳಿಂದ ಎಚ್ಚೆತ್ತ ಕಾಗೆಗಳು ಕಾ ಕಾ ಎಂದು ಆಗೊಮ್ಮೆ ಈಗೊಮ್ಮೆ ಕೂಗುತ್ತಿದ್ದವು. ಲಕ್ಷ್ಮಮ್ಮ ಕೊಂಚ ಗುಣವಾಗಿದ್ದಾಳೆಂದೇ ಹೇಳಬಹುದು. ಮಗು ಕೃಷ್ಣನನ್ನು ಆಲಿಂಗಿಸಿಕೊಂಡಿದ್ದಂತೆಯೇ ಶೇಷಜ್ಜಿ ಆರೋಹಣ ಅವರೋಹಣವಾಗಿ ಗೊರಕೆ ಹೊಡೆಯುತ್ತ ನಿದ್ರಿಸುತ್ತಿದ್ದರು.

ಎರಡು ಗಂಟೆ ಹೊಡೆಯಿತು. ರಂಗನಿಗೆ ಆಗಲೂ ನಿದ್ದೆ ಬರಲಿಲ್ಲ. ಉನ್ಮತ್ತನಾಗಿ ಹಾಸಿಗೆಯಲ್ಲಿ ಹೊರಳಿಹೊರಳಿ ಎದ್ದು ಕುಳಿತುಕೊಂಡ. "ಹಾಳಾದ ಬದುಕು. ಎಷ್ಟು ದಿನ ತಾನೇ ಹೀಗೆ ಕೆಲಸವಿಲ್ಲದೆ ಅಲೆದಲೆದು ಸಾಯೋದು? ಇನ್ಶ್ಯೂರೆನ್ಸ್ ಕೆಲಸಕ್ಕೂ ಎಷ್ಟೋ ಪ್ರಯತ್ನಪಟ್ಟಾಯಿತು. ತಿಂಗಳಿಗೆ ಹದಿನೈದೋ ಇಪ್ಪತ್ತೋ ಸಿಕ್ಕಿದರೂ ಸಾಕೆಂದರೆ ಅದೂ ಕುದುರೇ ಕೊಂಬು. ಏನು ತಾನೇ ಮಾಡಲಿ? ಮನೆಗೆ ಭಾರವಾಗಿ ನಾನೊಬ್ಬ ರಾಜುವೊಬ್ಬ! ಇಬ್ಬರೂ ದಂಡಾನ್ನದ ಧಡಿಯರು! ಅಪ್ಪ ತಾನೇ ಏನು ಮಾಡಿಯಾರು? ಸಂಪಾದನೆ ಮಾಡದೆ ಹೀಗೆ ದಂಡತಿಂಡಿಗೆ ಒಡೆಯರಾಗಿರುವುದಕ್ಕಿಂತ ಎಲ್ಲಿಗಾದರೂ ಓಡಿಬಿಟ್ಟರೇನು? ಓಡಿ ಮಾತ್ರ ಮಾಡುವುದೇನು? ಛೀ! ಇಂಥಾ ಸಂಕಟದ ಸ್ಥಿತಿಯಲ್ಲಿ ಈ ಜೀವವನ್ನು ಯಾಕೆ ಇಟ್ಟುಕೊಳ್ಳಬೇಕು? ಊರಿನೊಳಗಾದರೆ ಯಾರಾದರೂ ಕಂಡು ಹಿಡಿದು ಇಂಥವನೆಂಬ ಗುರುತು ಸಿಕ್ಕೀತು. ಇದರಿಂದ ಇವರಿಗೆಲ್ಲಾ ಕಷ್ಟ. ಇದ್ದು ಕೆಡಿಸಿದ, ಸತ್ತೂ ಕೆಡಿಸಿದ, ಎಂಬ ಅಪವಾದ ಬೇಡ. ಎಲ್ಲಿಯಾದರೂ ಪರದೇಶಕ್ಕೆ ಹೋಗಿ ಜೀವಬಿಡುವುದೇ ಸರಿ. ನಾನು ಬಿಡುಗಡೆಯಾಗಿ ಬಂದುಬಿಟ್ಟರೆ ನನ್ನನ್ನು ಕ್ರಮೇಣ ಮರೆತುಬಿಟ್ಟಾರು. ಇದೇ ಸರಿಯಾದ ಯೋಚನೆ" ಎಂದು ಅವನು ತೀರ್ಮಾನಿಸಿಕೊಂಡನು.

* * *

"ಸಾರ್, ಕೊಂಚ 'ಮರ್ಕ್ಯೂರಿಕ್ ಕ್ಲೋರೈಡ್' ಬೇಕಾಗಿದೆ, ಏನು ಕ್ರಯ?" ಎಂದು ಔಷಧದ ಷಾಪೊಂದಕ್ಕೆ ಹೊಕ್ಕು ಒಬ್ಬ ತರುಣನು ಕೇಳಿದನು.

"ಯಾರಪ್ಪಾ ನೀನು? ಯಜಮಾನರು ಇಲ್ಲ. ವೈದ್ಯರ ಚೀಟು ಇಲ್ಲದೆ ಕೊಡಲಿಕ್ಕಾಗುವುದಿಲ್ಲ" ಎಂದನು ಕಂಪೌಂಡರು.

"ಆ ಔಷಧ ಇಲ್ಲಿದೆಯೆ?"

"ಇದೆ."

"ಮತ್ತೇಕೆ ಕೊಡಬಾರದು?"

"ಅಕೋ, ಯಜಮಾನರೇ ಬಂದರು. ಅವರನ್ನೇ ಕೇಳಿರಿ" ಎಂದಂದು ಒಳಗೆ ಹೋದ.

ಆ ಔಷಧದ ಷಾಪಿನ ಒಡೆಯರಾದ ರಾಯರೂ, ಮತ್ತೊಬ್ಬನೂ ಜತೆಯಲ್ಲಿ ಅಲ್ಲಿಗೆ ಬಂದು, ಆ ತರುಣನನ್ನು ನೋಡಿ, "ಏನು? ನಿನಗೇನು ಬೇಕು?"

"ಒಂದು ಔಷಧ"

"ಎಲ್ಲಿ ಚೀಟು?"

"ಚೀಟಿಲ್ಲ. ಅದು ಸೇವಿಸಲಿಕ್ಕೆ ಅಲ್ಲ. ನಾನು ಚಿತ್ರಕಲೆ ಕಲಿಯುತ್ತಿದ್ದೇನೆ. ಅದಕ್ಕೆ ಮರ್ಕ್ಯೂರಿಕ್ ಕ್ಲೋರೈಡ್, ಒಳ್ಳೆ ರಕ್ತದ ಕೆಂಪಿಗೆ ಉಳಿದವುಗಳಿಗಿಂತ ಬಣ್ಣ ಕೊಡುತ್ತದಂತೆ, ನನಗೆ ಹೇಳಿಕೊಡುವವರು ಹೇಳಿದರು."

"ಮರ್ಕ್ಯೂರಿಕ್ ಕ್ಲೋರೈಡಾ? ಡಾಕ್ಟರ ಅನುಜ್ಞೆಯಿಲ್ಲದೆ ಅದನ್ನು ಕೊಡಕೂಡದಲ್ಲ!"

"ಇಲ್ಲ ಸಾರ್. ನಾಡದೊಂದು ಚಿತ್ರಸ್ಪರ್ಧೆಯಿದೆ. ನಾನು ಡಾಕ್ಟರನ್ನು ಹುಡುಕಿ ಚೀಟಿಪಡೆದು ಬರುವಷ್ಟು ವೇಳೆಯಿಲ್ಲ. ನಾಳೆಯೊಳಗೆ ಚಿತ್ರವನ್ನು ಮುಗಿಸಬೇಕಾಗಿದೆ. ಏನೋ ಪ್ರೈಸು ಬಂದರೆ, ಬದುಕಲು ದಾರಿ ನೋಡಬಹುದು" ಎಂದು ದೀನಸ್ವರದಲ್ಲಿ ಎಳೆವೆಳೆದು ಆ ತರುಣನು ಹೇಳಿದನು.

"ಸರಿ. ನಿಂದು ಯಾವೂರು?"

“ಪನಂಗುಡಿ”

“ಇಲ್ಲಿ ಎಲ್ಲಿದ್ದಿ?”

“ಮೈಲಾಪುರದಲ್ಲಿ, ವಸಂತ ವಿಹಾರದಲ್ಲಿ.”

“ಏನು ಚಿತ್ರ ಬರೆಯುತ್ತಿ?”

“ಅಫಘಾನ್ ಹುಲಿಬೇಟೆ”

“ಇದರಲ್ಲಿ ಕೆಂಪುಬಣ್ಣ ಅಷ್ಟು ಅಗತ್ಯವಾ?”

“ಹುಲಿ ಬಾಯಿ, ನಾಲಗೆ ಮೊದಲಾದ ಇನ್ನೂ ಕೆಲವಂಶಕ್ಕೆ ಅತೀ ಅಗತ್ಯವಿತ್ತು.”

“ಸರಿ. ತಕ್ಕೊಂಡು ಹೋಗು”

* * *

ಆ ತರುಣನು ಹೊರಗೆ ಹೋದೊಡನೆ ರಾಯರ ಜತೆಯಲ್ಲಿ ಬಂದವನು “ಈ ಹುಡುಗ ಯಾತಕ್ಕಾಗಿ ಅದನ್ನು ಒಯ್ದನೋ ಎಂದು ನನಗೆ ಸಂದೇಹ ವಾಗಿದೆ” ಎಂದನು.

“ಸಂದೇಹವೇಕೆ? ತಕ್ಕ ಕಾರಣ ಹೇಳಿದನಲ್ಲ?” ಎಂದರು ರಾಯರು.

“ಏನೋ “ಇಯನಿಯ” ಎಂದು ಜಾರಿಸಿಕೊಂಡ. ಅವನ ಮಾತು ಸತ್ಯವೆಂದು ನನಗೇನೂ ತೋರುವುದಿಲ್ಲ.”

“ಅವನು ಸ್ವಭಾವದಿಂದಲೇ ಹಾಗೇ ಮಾತಾಡುತ್ತಾನೋ ಏನೋ, ನಮಗೇನು ಗೊತ್ತು? ಹಾಗಿದ್ದರೆ ನೀವು ಮೊದಲೇ ಹೇಳಬಹುದಿತ್ತಲ್ಲಾ? ಏನಾದರೂ ಅನರ್ಥವಾದೀತೊ?”

“ನಾನೇನೋ ಯೋಚಿಸುತ್ತಿದ್ದೆ. ಈಗ ತಾನೇ ಹಾಗೆ ತೋರುತ್ತದೆ.”

“ಇದ್ದೀತು. ಎಲ ಗ್ರಹಚಾರವೆ! ಏ ಹುಡುಗಾ! ಈಗ ಔಷಧ ತೆಕ್ಕೊಂಡು ಹೋದನಲ್ಲಾ. ಅವನು ಬೀದಿಯಲ್ಲಿ ಹೋಗುತ್ತಿದ್ದಾನು. ಕರಿಯುತ್ತ” ಎಂದರು ರಾಯರು.

“ಆದರೆ ನಾನು ಯೋಚಿಸಿದಂತಾದರೆ, ಅವನು ಇಷ್ಟೊತ್ತಿನಲ್ಲಿ ಹಕ್ಕಿಯಂತೆ ಹಾರಿದ್ದಾನು. ಇಲ್ಲದಿದ್ದರೆ ಮೈಲಾಪುರದ ಟ್ರಾಂ ಬಂಡಿಯಲ್ಲಿ

ಏರಿರಬೇಕು. ಇರಲಿ. ಸನಗೂ ಕೆಲಸವಿದೆ. ನಿಮ್ಮ ಈ ಹುಡುಗನಿಗೆ ಅವನ ಗುರುತಿಲ್ಲ. ನಾನು ಒಮ್ಮೆ ಕಂಡವರನ್ನು ಗುರುತು ಮರೆಯಲಾರೆ. ನಾನೇ ಅವನನ್ನು ಹಿಡಿದು ಬಿಡುತ್ತೇನೆ" ಎಂದೆದ್ದನು ಆ ಮತ್ತೊಬ್ಬ.

"ಅದೇನು? ನೀವಿಂದು ಮೈಲುಗಾಡಿಯಲ್ಲಿ ಮಧುರೆಗೆ ಹೊರಡುವುದಿಲ್ಲವೆ?"

"ಹೋಗಬೇಕು. ಇಂದೂ ಹೋಗಬಹುದು, ನಾಳೆಯೂ ಹೋಗಬಹುದು. ಈ ಹುಡುಗನ ವಿಚಾರ ಮೊದಲು ತಿಳಿಯುವ. ಹಿಂದೆ ಏನಾದರೂ ಕೆಡುಕಾದರೆ ನಿಮ್ಮ ವ್ಯಾಪಾರಕ್ಕೆ ಅಗೌರವವಲ್ಲವೆ?"— ಎಂದಂದು ಲಗುಬಗೆಯಿಂದ ಹೊರಗೆ ನಡೆದನು.

* * *

ರಂಗನು ಮದ್ದಿನಂಗಡಿಯಿಂದ ಬೇಗಬೇಗನೆ ನಡೆಯುತ್ತಾ ಎಗ್ಮೋರು ಸ್ಟೇಶನ್ನಿಗೆ ಮುಟ್ಟಿದನು. ವಿಳುಪ್ಪುರಂಗೆ ಒಂದು ಟಿಕ್ಕೆಟ್ ಪಡೆದುಕೊಂಡು, ಪ್ಲಾಟ್‌ಫಾರಂನ ಒಂದು ಮೂಲೆಯಲ್ಲಿ ಯಾರ ಕಣ್ಣಿಗೂ ಬೀಳದಂತೆ ಕಾದಿದ್ದ. ರೈಲೂ ಬಂತು. ಖಾಲೀಬಂಡಿಯೊಂದನ್ನು ನೋಡಿ ಏರಿ ಒಂದು ಮೂಲೆಯಲ್ಲಿ ಕುಳಿತುಕೊಂಡ. ತಲೆಬಾಗಿಸಿ ಕಣ್ಣು ಮುಚ್ಚಿಕೊಂಡು ಯೋಚನೆಯಲ್ಲಿ ಮುಳುಗಿದನು.

"ಏನಪ್ಪಾ? ನೀನು ಮೈಲಾಪುರಕ್ಕೆ ಹೋಗದೆ, ಎಲ್ಲಿಗೆ ರೈಲೇರಿಬಿಟ್ಟಿಯಲ್ಲ?" ಎಂಬ ಸದ್ದನ್ನು ಕೇಳಿ, ರಂಗ ಧಿಡುಕ್ಕಿಟ್ಟಿದ್ದು ತಿರುಗಿ ನೋಡಿ, ಬೆಪ್ಪಾಗಿ ಹೋದನು. ಬಂದವನೋ ಅವನ ತೀರ ಸಮೀಪಕ್ಕೆ ಬಂದು, ಕೈಗಳನ್ನು ಹಿಡಿದು,—"ಯಾವುದಕ್ಕಾಗಿ ಆ ಔಷಧ ತೆಗೆದುಕೊಂಡಿ?" ಎಂದನು.

ರಂಗನ ಮೈ ಭಯದಿಂದ ಬೆವರಿತು. ಕೈಕಾಲುಗಳು ನಡುಗಿದುವು. ಪೋಲೀಸನಾಗಿರುವನೇನೋ ಎಂದು ಒಂದು ಕ್ಷಣ ನೆನೆದನು. ಅವನ ಖಾದೀ ಭೂಷಣವನ್ನು ಕಂಡು, ಹಾಗಿಲ್ಲವೆಂದು ತಿಳಿದು ಕೊಂಚ ಧೈರ್ಯ ತಾಳಿದನು. ಇದಿರುನೋಡದ ಆ ಸಂಭವದಿಂದ, ಏನುಹೇಳಬೇಕೆಂದೇ ಅವನಿಗೆ ತೋರದೆ ಹೋಯಿತು.

“ಓಹೋ! ಸಮಯಕ್ಕೆ ತಕ್ಕ ಸುಳ್ಳು ಕಲ್ಪಿಸಲಿಕ್ಕೆ ಆಗಲಿಲ್ಲ ಅಂತ ಕಾಣುತ್ತದೆ. ಯಾಕೆ ತೆಗೆದುಕೊಂಡಿ? ಸತ್ಯ ಹೇಳಿಬಿಡು” ಎಂದನು ಆ ಹೊಸಬ.

ಆಗಲೂ ರಂಗನು ಮಾತಾಡಲಿಲ್ಲ. ಹೊಸಬನು ಅವನ ಕೈಯನ್ನು ಇನ್ನಷ್ಟು ಸಮೀಪಕ್ಕೆ ಎಳೆದು, ಅನುತಾಪದ ದನಿಯಿಂದ,—“ನಮ್ಮ ಹೊರತು ಇಲ್ಲಿ ಬೇರೆ ಯಾರೂ ಇಲ್ಲ. ಏಕೆ ಹೆದರುತ್ತಿ? ಭಯಪಡದೆ ಸತ್ಯವನ್ನು ಹೇಳಯ್ಯ” ಎಂದನು.

ರಂಗನು ಕಳಾಹೀನವಾದ ಕಣ್ಣಿನಿಂದ ಒಮ್ಮೆ ಆತನ ಮುಖವನ್ನು ನೋಡಿ, ಮತ್ತೆ ನೋಡಲಾರದೆ ತಲೆ ಬಾಗಿದನು. ಅವನ ಕಣ್ಣಿನಿಂದ ಕಣ್ಣೀರಿಳಿಯತೊಡಗಿತು.

“ಅಯ್ಯ! ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ನಿನಗೆ ಜೀವದ ಮೇಲೆ ವೈರಾಗ್ಯ ಬರಲಿಕ್ಕೇನಾಯಿತು? ಮಲತಾಯಿಯೇ ನಿನಗೆ? ತಂದೆಗೇನು ಕೆಲಸ?” ಎಂದು ಹೊಸಬನು ಕರುಣೆಯಿಂದ ಕೇಳಿದನು.

ರಂಗನು ತತ್ತರಿಸತೊಡಗಿದ. ಇಷ್ಟು ಮನಗರಗಿ ಕೇಳುವವನೊಡನೆ ನಿಜವನ್ನು ಹೇಳಲೇ ಬಿಡಲೇ ಎಂದು ಅವನನ್ನು ಪೂರಾ ನೋಡಲಾರಂಭಿಸಿದನು.

“ನನ್ನೊಡನೆ ಹೇಳುವುದಕ್ಕೆ ಏನೂ ಸಂದೇಹಪಡುವುದು ಬೇಡ. ಅನ್ಯರ ವಿಷಯದಲ್ಲಿ ಅನಾವಶ್ಯಕವಾಗಿ ತಲೆಯಿಡುವವನು ನಾನಲ್ಲ. ಹೇಳಲೇಬೇಕೆಂದು ನಿನಗೆ ಒತ್ತಾಯಮಾಡುವುದೂ ಇಲ್ಲ. ನೀನು ನಿನ್ನ ಮನಸ್ಸಿನಲ್ಲಿದ್ದುದ್ದನ್ನು ಬಚ್ಚಿಡದೆ ಹೇಳಿದರೆ, ನನ್ನಿಂದಾದಮಟ್ಟಿಗೆ ನಾನೇನಾದರೂ ಸಹಾಯಮಾಡುವೆನು, ನಂಬು. ನಿನ್ನನ್ನು ಕಂಡ ಮೊದಲು, ನಿನ್ನಮೇಲೆ ನನಗೇಕೋ ಅಕ್ಕರೆಯುಂಟಾಗಿದೆ. ಏಕೆ ಗೊತ್ತೊ? ನೀನು ನನ್ನ ಒಬ್ಬ ಪ್ರೀತಿಯ ಗೆಳೆಯನ ಹಾಗೆಯೇ ಇದ್ದಿ. ಸ್ವಲ್ಪ ಹೆಚ್ಚು ಕಡಮೆ ಅವನ ಹೋಲಿಕೆ ನಿನಗಿದೆ. ಪಾಪ! ಅವನು ತಿರುಚನಾಪಲ್ಲಿಯಲ್ಲಿ ಕಲಿಯುವಾಗ, ಕಾವೇರಿಯಲ್ಲಿ ಈಜಾಟಕ್ಕಿಳಿದು ಮುಳುಗಿಹೋಗಿಬಿಟ್ಟ. ನನ್ನಿಂದಾಗುವ ಎಂಥ ಸಣ್ಣ ಸಹಾಯವಾದರೂ, ನಿನಗೆ ಮಾಡಲು ನಾನು ಸಿದ್ಧನಾಗಿದ್ದೇನೆ. ನಿನಗೆ ಇಷ್ಟವಿದ್ದು ನನ್ನಮೇಲೆ ನಂಬಿಕೆಯಿದ್ದರೆ

ನನ್ನೊಡನೆ ಹೇಳು. ಈಗ ಇಲ್ಲಿ ನಾವಿಬ್ಬರೇ ಇದ್ದೇವೆ. ಇಲ್ಲಿ ನಾವಿಬ್ಬರೇ ಇರುವ ಹಾಗೆ ಮಾಡಿದ್ದು ಈಶ್ವರಾಜ್ಞೆ ಎಂಬುದು ನಿನಗೆ ಗೊತ್ತಾಗುವುದಿಲ್ಲವೆ?'' ಎಂದು ಆ ಹೊಸಬನಂದನು.

ಅದರ ಮೇಲೆ ರಂಗನಿಂದ ಸುಮ್ಮನಿರಲಾಗಲಿಲ್ಲ. ತನ್ನ ಹಾಗು ತನ್ನ ಕುಟುಂಬದ ನೆಲೆಬೆಲೆಗಳನ್ನೆಲ್ಲಾ ವಿವರವಾಗಿ ಹೇಳಿದನು. ಅವನು ಹೇಳಿ ಮುಗಿಸುವವರೆಗೂ ಶಿಲಾಪ್ರತಿಮೆಯಂತೆಯೇ ಕುಳಿತುಬಿಟ್ಟಿದ್ದನು ಹೊಸಬ. ಅವನು ಮುಗಿಸುತ್ತಲೇ ಇವನು ನೀಳುಸಿರುಬಿಟ್ಟನು. ನಂತರ ಕೊಂಚ ಹೊತ್ತು ಇಬ್ಬರೂ ಮೌನ.

''ಸರಿಯಪ್ಪಾ. ಇಷ್ಟೆಲ್ಲ ದುಃಖವನ್ನನುಭವಿಸಿದವರ ಮೇಲೆ ಅಪಾರವಾದ ದಯೆಯನ್ನಿಟ್ಟು, ನೀನು ಆತ್ಮಹತ್ಯಮಾಡಿಕೊಂಡು, ಅವರನ್ನು ಇನ್ನಷ್ಟು ದುಃಖದಲ್ಲಿ ಬೇಯಿಸಬೇಕೆಂದು ಯೋಚಿಸಿದಿಯಾ?'' ಎಂದು ಕೇಳಿದನು ಹೊಸಬ.

ರಂಗನು ಉತ್ತರಿಸಲಿಲ್ಲ. ''ಎಲೆ ಹುಚ್ಚ! ಎಂಥಾ ಬೃಹಸ್ಪತಿಯೋ ನೀನು? ಕಟ್ಟಿಗೆ ಒಡೆಯುವವನು ದಿನಾ ನಾಲ್ಕಾಣೆ ಸಂಪಾದಿಸುತ್ತಾನೆ. ರಿಕ್ಷಾ ಎಳೆಯುವವನು ಕೂಡ ಒಂದು ರೂಪಾಯಿ ಸಂಪಾದಿಸುತ್ತಾನೆ. ನೀನು ಕಲ್ತವ. ಗೌರವ–ಅಗೌರವ ಎಂದು ನೋಡದೆ ಏನಾದರೊಂದು ಕೆಲಸಮಾಡಿಕೊಂಡು ಸಂಪಾದಿಸಲಿಕ್ಕೆ ಕೂಡದೆ? ಮೂಟೆ ಹೊತ್ತರೆ ಕೂಡ ಒಂದು ದಿನಕ್ಕೆ ಒಂದು ರೂಪಾಯಿ ಸಂಪಾದಿಸಬಹುದಲ್ಲ? ಮನುಷ್ಯನಿಗೆ ಸಾಧ್ಯವಿಲ್ಲ ಎಂಬುದೊಂದು ಉಂಟೆ? ಆತ್ಮಹತ್ಯ ಮಾಡಿಕೊಳ್ಳುವವನು ಗಂಡುಸಾಗುವನೆ? ಭೇಷ್! ಒಳ್ಳೇ ಯುಕ್ತಿ ಕಂಡುಹಿಡಿದಿ! ಸತ್ತುಬಿಡುವುದಾಗಿಯೇ ಇಟ್ಟುಕೊಳ್ಳುವ. ಅಲ್ಲಿ ಇದಕ್ಕಿಂತಲೂ ಸುಖವೆಂದು ಯಾರಾದರೂ ನೋಡಿಬಂದು ನಿನಗೆ ಹೇಳಿದ್ದಾರೊ? ಮಾತಾಡದೆ ನನ್ನೊಂದಿಗೆ ನಮ್ಮ ಊರಿಗೆ ಬಾ. ಮತ್ತೆ ಯೋಚಿಸಿ ನಿನಗೆ ಯಾವುದು ಇಷ್ಟವೋ ಅದರಂತೆ ಮಾಡುವ'' ಎಂದನು.

ಇದನ್ನು ಕೇಳಿ ರಂಗನಿಗೆ ದುಃಖವು ಉಕ್ಕುಕ್ಕಿ ಬರುತ್ತ ಗಂಟಲು ಮುಚ್ಚಿಕೊಂಡಿತು. ಕಣ್ಣೀರು ಪ್ರವಾಹದಂತೆ ಸುರಿಯಿತು. ಪರಿತಾಪವಾಗಿ ಬಿಕ್ಕಳಿಸಲಾರಂಭಿಸಿದನು. ಹೊಸಬನು ಪ್ರೇಮದಿಂದ ಅವನನ್ನು

ತಡವುತ್ತ,—"ದಡ್ಡಾ ದಡ್ಡ! ಹೀಗೆ ಅಳುವವರಿದ್ದಾರೇನೊ? ನಾನೇ ನಿನ್ನ ಹಾಗಿದ್ದಾಗ ಇದಕ್ಕಿಂತ ದೊಡ್ಡ ಕಷ್ಟವನ್ನೆಲ್ಲ ಅನುಭವಿಸಿದ್ದೇನೆ. ಪ್ರಪಂಚದ ಕಷ್ಟ-ನಿಷ್ಠುರಗಳಿಗೆಲ್ಲಾ ಹೆದರಿ ಸತ್ತುಕೊಳ್ಳುವವನು ಒಬ್ಬ ತೀರ ಪುಕ್ಕ. ಅದು ಹೋಗಲಿ. ನೀನು ನನ್ನ ಕೂಡೆ ಮಧುರೆಗೆ ಬಾ. ಕೆಲಸಕ್ಕೆ ನಾನು ಏನಾದರೂ ಏರ್ಪಾಡು ಮಾಡುತ್ತೇನೆ" ಎಂದನು.

ಅಷ್ಟರಲ್ಲಿ ವಿಳುಪ್ಪುರ ಸ್ಟೇಶನ್ ಬಂತು. ಹೊಸಬನು ಇಳಿದು ಹೋಗಿ ರಂಗನಿಗಾಗಿ ಮಧುರೆಗೆ ಒಂದು ಟಿಕೆಟ್ ಪಡೆದುಕೊಂಡು ಬಂದನು. ರಂಗನಿಗೆ ಇದೆಲ್ಲಾ ಕನಸಿನಂತೆ ತೋರುತ್ತಿತ್ತು. ಅವನು ಹೊಸಬನನ್ನು ನೋಡಿ, "ಎಲ್ಲಾ ಸರಿ. ಇನ್ನೂ ನೀವು ಯಾರೆಂದೂ, ನನ್ನ ವಿಷಯವಾಗಿ ಇಷ್ಟು ಶ್ರದ್ಧೆ ವಹಿಸಿದಿರೇಕೆಂದೂ ಹೇಳಲೇ ಇಲ್ಲವಲ್ಲ?" ಎಂದು ಕೇಳಿದನು.

ಹೊಸಬನು ಉತ್ತರ ಕೊಡುವುದರೊಳಗೆ, ಒಬ್ಬ ಮುದುಕನೂ ಮುದುಕಿಯೂ ತಮ್ಮ ಗಂಟುಮೂಟೆ ಗದಡಿಗಳೊಂದಿಗೆ ಆ ಬಂಡಿಯೊಳಗೆ ಏರಿಕೊಂಡರು.

ಬಂದ ಮುದುಕಿ ಈ ಇಬ್ಬರನ್ನು ನೋಡಿ,—"ನೀವು ಯಾವೂರಿಗೆ ಹೋಗ್ತೀರಿ?" ಎಂದು ಕೇಳಿದಳು.

"ಮಧುರೆಗೆ" ಎಂದು ರಂಗನಂದನು.

ಮುದುಕಿ ಅಷ್ಟಕ್ಕೆ ಸುಮ್ಮನಾಗದೆ,—"ಏನಪ್ಪಾ? ಅಲ್ಲಿ ಯಾವ ಬೀದಿ? ನಿನಗೆ ಮದುವೆಯಾಗಿದೆಯೊ? ಅಕ್ಕ-ತಂಗೆಂದಿರೆಲ್ಲಾ ಇದ್ದಾರಾ? ಯಾವ ಗೋತ್ರ?" ಎಂದು ವಿಚಾರಿಸತೊಡಗಿದಳು.

ಹೊಸಬನು ಕಿಸಕ್ಕನೆ ನಕ್ಕನು. "ಮದುವೆಗೋ? ನನಗೆ ಸಂನ್ಯಾಸ ತಕ್ಕೊಂಡ ನಂತರವೇ ಮದುವೆ. ಇವನಿಗೆ...." ಎಂದು ಪ್ರಾರಂಭಿಸಿ ದಾಗ ರಂಗನಿಗೂ ನಗು ಬಂತು.

ಅಜ್ಜಿಯ ಮುಖ ಕೆಂಪಾಯಿತು. "ಏನೋ ನೋಡಿದರೆ ಬ್ರಹ್ಮಚಾರಿ ಗಳಂತಿದ್ದೀರೀ ಅಂತ ಕೇಳಿದೆ. ನೀವು ಬಡಗಡೆಯವರಾ ತೆಂಗಡೆಯವರಾ?" ಎಂದಳು.

"ನಾವೆಲ್ಲ ಅಜ್ಜ ಬಡುಗು ದಿಕ್ಕಿನವರು ನೀವೂ?" ಆ ಹೊಸಬನು ಕೇಳಿದ.

"ನಾವೂ ಬಡಗರೇ. ಒಳ್ಳೇ ಹುಡುಗರಾಗಿದ್ದೀರಲ್ಲಾ ಕೇಳುವಾ ಅಂತ......" ಎಂಬಾಗ, ಅಷ್ಟರವರೆಗೆ ಬಾಯಿಯೊಳಗೆ ವೀಳ್ಯವನ್ನು ತುಂಬಿಸಿ ದವಡೆಯನ್ನುಬ್ಬಿಸಿಕೊಂಡಿದ್ದ ಆ ಮುದುಕರು ಅದನ್ನು ಉಗುಳಿ ಬಿಟ್ಟು,—"ಎಂಥ ಮಾತು ಸುಮ್ಮಸುಮ್ಮನೇ, ಸುಮ್ಮನಿರು. ಬಂಡಿಗೆ ಹತ್ತುವುದರೊಳಗೆ ಒಳ್ಳೆಹುಡುಗ ಕೆಟ್ಟಹುಡುಗ ಎಂಬುದೆಲ್ಲಾ ನಿನಗೆ ಗೊತ್ತಾಗಿಹೋಯಿತೇನು?" ಎಂದರು.

"ಬಾಯಿಯಲ್ಲಿ ಹೊಗೆ ಸೊಪ್ಪಿಲ್ಲಾ, ಕೈಯಲ್ಲಿ ಹೊಗೆ ಬತ್ತಿಯೂ ಇಲ್ಲಾ. ಆ ಹುಡುಗ ನೋಡಿದರೆ ಖಾದೀವಸ್ತ್ರ ಉಟ್ಟುಕೊಂಡಿದ್ದಾನೆ. ಆದ್ದರಿಂದ ಒಳ್ಳೇ ಹುಡುಗರೂ ಅಂತ ನೆನೆಸಿದೆ. ಹೆಣ್ಣು ಹೆತ್ತರೆ ವಿಚಾರ ತಾನೆ? ಈ ವೈಭವದಲ್ಲಿ ಯಾರೋ ಶಾರದಾಂಬೆಯಂತೆ, ಅವಳದೊಂದು ಬೀಲಂತೆ (bill). ಅದರಲ್ಲಿ ಹದಿನಾಲ್ಕು ವಯಸ್ಸಾದ ಮೇಲಷ್ಟೇ ಮದುವೇ ಮಾಡಬೇಕೂ ಅಂತ ರೂಲು ಹಾಕಿದ್ದಾಳಂತೆ. ಸರ್ಕಾರ ದೋರು ಅದನ್ನ ಪಾಸು ಮಾಡಿದ್ದಾರಂತೆ. ಆ ಪಾಪಿ ಯಾರೋ ಯಾವ ಜಾತಿಯೊ!" ಎಂದಳು ಆ ಮುದುಕಿ.

ಇದನ್ನು ಕೇಳಿ ರಂಗನೂ ಅವನ ಹೊಸ ಮಿತ್ರನೂ ಕಿರುನಗೆ ನಕ್ಕರು.

ತನ್ನ ಹೆಸರು ಜಗದೀಶನೆಂದೂ, ಉಳಿದ ವಿವರಗಳನ್ನೆಲ್ಲಾ ಮಧುರೆಗೆ ಹೋಗಿ ತಿಳಿಸುವೆನೆಂದೂ ಹೊಸಬನು ರಂಗನಿಗೆ ಹೇಳಿದನು.

# ಜಗದೀಶನ ವೃತ್ತಾಂತ

ಸಂಜೆಯ ವೇಳೆ. ಹಕ್ಕಿಗಳು ಕಲಕಲರವ ಮಾಡುತ್ತ ಮರಗಳ ಬಳಿ ಹಾರಾಡುತ್ತಿದ್ದುವು. ಆಕಾಶವು ಕೆಂಪಾಗಿ ಸುಂದರವಾದೊಂದು ಚಿತ್ರದಂತೆ ತೋರುತ್ತಿತ್ತು. ಬಿಂದಿಗೆಯನ್ನೆತ್ತಿಕೊಂಡು, ಸಣ್ಣ ಹೆಣ್ಣು ಮಕ್ಕಳು ಊರ ಸಮಾಚಾರವನ್ನು ಮಾತಾಡುತ್ತ ನಡೆದಿದ್ದರು. ಸಾಯಂಕಾಲದ ಜಪ ತಪಕ್ಕಾಗಿ ದೊಡ್ಡವರು ಬಾಯಿಯಲ್ಲಿ ಏನೇನೋ ಗೊಣಗುಡುತ್ತ, ವೈಗೇ ನದಿಯ ಕಡೆಗೆ ತೆರಳುತ್ತಿದ್ದರು.

ವರುಷದಲ್ಲಿ ಕೆಲವು ತಿಂಗಳಷ್ಟೇ ವೈಗೆಯಲ್ಲಿ ನೀರಿರುತ್ತಿತ್ತು. ಉಳಿದ ಕಾಲದಲ್ಲೆಲ್ಲಾ ಒಣಗಿದ ಹೊೖಗೇ ನದಿಯುದು. ಊರ ಮಕ್ಕಳು ಓಡಿಯಾಡಲಿಕ್ಕೂ, ಯುವಕರು ಗಾಳೀ ಸೇವನೆಗೂ, ದೊಡ್ಡವರು ಓಡುವ ಕಾಲುನೀರಿನಲ್ಲಿ ತಮ್ಮ ಅನುಷ್ಠಾನಗಳನ್ನು ಮಾಡಲಿಕ್ಕೂ ಅದು ತಕ್ಕ ವಸತಿಯಾಗಿತ್ತು. ಆ ಹೊೖಗೆಯ ರಾಶಿಯಲ್ಲಿ ರಂಗನೂ ಅವನ ಹೊಸ ಮಿತ್ರನೂ ಒಬ್ಬರನ್ನೊಬ್ಬರು ನೋಡುತ್ತ ಮೌನವಾಗಿ ಕುಳಿತಿದ್ದರು.

ಕೊಂಚ ಹೊತ್ತುತಾಳಿ ರಂಗ ಮಾತಾಡತೊಡಗಿದ. "ದೇವಾರಕ್ಕೆ ಹೋಗುವ ಬಸ್ಸು ರಾತ್ರಿ ಎಂಟುಗ್ಗಂಟೆಗೆ. ನಾವಿನ್ನೂ ಒಂದು ಗಂಟೆ ತಾಳಿ ಹೋದರೆ ಸಾಕಷ್ಟೆ? ಇಷ್ಟರೊಳಗೆ ನಿಮ್ಮ ವಿಷಯವನ್ನೆಲ್ಲ ತಿಳಿಯ ಬೇಕೆಂದು ನನಗೆ ತುಂಬ ಆಸೆಯಾಗಿದೆ" ಎಂದನು.

ಸ್ನೇಹಿತನು ಹೇಳತೊಡಗಿದನು :—.

"ನಾವು ಮೊದಲು ಸೇಲಂ ನಿವಾಸಿಗಳು. ನನ್ನ ತಾಯಿ ಅವಳ ತಂದೆಗೆ ಒಬ್ಬಳೇ ಪ್ರೀತಿಯ ಮಗಳು. ನನ್ನ ಅಜ್ಜ ನಾಮಗಲ್ಲಿನಲ್ಲಿ ಏನೋ ಕೊಡ-ಕೊಳ್ಳುವುದನ್ನಿಟ್ಟುಕೊಂಡು, ಕೊಂಚ ಭೂಮಿಯನ್ನಿಟ್ಟುಕೊಂಡು ಬೇಸಾಯಮಾಡುತ್ತ, ಬಹಳ ಜಾಗರೂಕರಾಗಿ ಜೀವಿಸಿಬಂದರು. ನನ್ನಜ್ಜ ನಿಗೆ ಒಬ್ಬಳು ತಂಗಿ. ಅವಳು ಎಳೆಪ್ರಾಯದಲ್ಲಿಯೇ ಒಂದು ಗಂಡು ಮಗುವಿನೊಂದಿಗೆ ವಿಧವೆಯಾಗಿ, ನನ್ನಜ್ಜನೊಂದಿಗೇ ಬಂದಿದ್ದಳು. ಅವಳು ಬಂದ ಎರಡು ಮೂರು ವರುಷದಲ್ಲಿ ನನ್ನ ತಾಯಿ ಹುಟ್ಟಿದಳಂತೆ. ಅದುವರೆಗೆ ಮಕ್ಕಳಿಲ್ಲದಿದ್ದ ನನ್ನಜ್ಜ, ತಂಗಿಯ ಮಗ ಮನೆಗೆ ಬಂದ

ಮೇಲೆಯೇ, ತಮಗೆ ಮಗು ಹುಟ್ಟಿದುದರಿಂದ, ಆ ಹುಡುಗನನ್ನು ಅತ್ಯಂತ ಪ್ರೀತಿಯಿಂದ ಪರಾಮರಿಸಿಕೊಂಡು ಬಂದರು. ನನ್ನ ಅಜ್ಜಿಯೂ ಹಾಗೆಯೇ. ಆದರೆ ನನ್ನಜ್ಜನ ತಂಗಿ ಬಹಳ ಅಸೂಯಾಪರಳಾಗಿದ್ದಳು. ಯಾವಾಗಲೂ ನನ್ನಜ್ಜಿಯನ್ನು ದೂರುವಳು. ಅದರಿಂದ ಅಜ್ಜ ಕೂಡ ರೇಗಿ ಹೆಂಡತಿಗೆ ಪೆಟ್ಟು ಕೂಡಾ ಕೊಡುತ್ತಿದ್ದರು. ಆದರೂ ಅವರು ಏಕಾಂತದಲ್ಲಿ ಹೆಂಡತಿ ಯನ್ನು ಕುರಿತು, 'ಕಾಲಿಗೆ ಸುತ್ತಿದ ಹಾವು ಕಚ್ಚದೆ ಬಿಟ್ಟೀತೆ? ಅವಳು ದುರ್ಗುಣಿ ಎಂಬುದು ಊರಿಗೆಲ್ಲ ಗೊತ್ತು. ಏನೋ ನಮ್ಮಲ್ಲಿಗೆ ಬಂದಿದ್ದಾಳೆ. ಏನು ಮಾಡುವುದು? ಅವಳು ಚಾಡಿ ಹೇಳುವಾಗ ನೀನು ಎದುರಿಗೆ ಬರಬೇಡ' ಎಂದು ಹೇಳುವರು. ಆದರೂ ತಂಗಿಯ ಮೇಲೆಯೂ, ಅವಳ ಮಗ ಪಂಚನದನೊಡನೆಯೂ ಅವರು ಪೂರ್ಣ ಅಭಿಮಾನದಿಂದಿದ್ದರು.

ಕಡೆಗೆ ನನ್ನಜ್ಜನ ತಂಗಿ ಅನ್ನಪೂರ್ಣಮ್ಮನಿಗೆ ಹಗುರಾಗುವಂತೆ ನನ್ನ ಅಜ್ಜಿ ತೀರಿಹೋದಳು. ಆಗ ನನ್ನ ತಾಯಿಗೆ ಏಳು ವರ್ಷ. ಅನ್ನಪೂರ್ಣಮ್ಮನ ಮಗ ಪಂಚೂಗೆ ಹತ್ತು ವರ್ಷ. ಅತ್ತೆಯೋ ಈ ಹುಡುಗಿಯನ್ನು ಹೊರ ಗೆಲ್ಲಿಗೂ ಕೊಡದೆ, ತನ್ನ ಮಗ ಪಂಚುವಿಗೇ ಕೊಡಬೇಕೆಂದು ಅಣ್ಣನನ್ನು ಒತ್ತಾಯಿಸತೊಡಗಿದಳು. ಸೊಸೆಯನ್ನು ತಾಯಿ ಇಲ್ಲದ ಮಗುವಾಯಿತಲ್ಲ ಎಂದು ಕೊಂಚವೂ ಕನಿಕರಿಸದೆ ನಡೆಸಿಕೊಂಡು ಬಂದಳು. ಅಣ್ಣನ ಇದಿರಿ ನಲ್ಲಿ ಮಾತ್ರ ಹುಡುಗಿಯ ಮೇಲೆ ಬಹಳ ಪ್ರೇಮವನ್ನು ನಟಿಸುತ್ತಿದ್ದಳು.

ಆದರೆ ಈ ರಹಸ್ಯ ಎಷ್ಟುದಿನ ಗುಟ್ಟಾಗಿದ್ದೀತು? ನನ್ನಜ್ಜನಿಗೆ ಗೊತ್ತಾಯಿತು. ಆಗ ನನ್ನ ತಾಯಿಗೆ ವಯಸ್ಸು ಹನ್ನೊಂದು. ತಂಗಿಯ ಮಗನಿಗೆ ಹೆಣ್ಣು ಕೊಡಲಾಗುವುದಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟರು. ಅದಕ್ಕೆ ಸರಿಯಾಗಿ ಅವಳ ಮಗನೂ ಪೋಲೀ ಸಹವಾಸಕ್ಕೆ ಬಿದ್ದು ಬಿಟ್ಟಿದ್ದ. ಇದೆಲ್ಲ ಸೇರಿ ಅನ್ನಪೂರ್ಣಮ್ಮನಿಗೆ ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಗಿತ್ತು.

ಎಷ್ಟೋ ಅತ್ತು ಕರೆದು ಸಾಹಸಮಾಡಿ ನೋಡಿದಳು. ಅಜ್ಜ ಕೇಳಲಿಲ್ಲ. ಅವರು ಮಧುರೆಯ ದೇವಸ್ಥಾನದಲ್ಲಿ ಗುಮಾಸ್ತರಾಗಿದ್ದ, ನನ್ನ ತಂದೆಗೆ ಮಗಳನ್ನು ಕೊಟ್ಟು ಮದುವೆ ಮಾಡಿಬಿಟ್ಟರು. ಮದುವೆ ಯಾದ ಮರುವರುಷವೇ ನನ್ನ ತಾಯಿ ಬಾಳುವೆಗೆ ಬಂದುಬಿಟ್ಟಳು. ನನ್ನ

ತಾಯಿ: ಅತ್ಯಂತ ಸುಂದರಿ. ಅವಳ ಸೌಂದರ್ಯ ವರ್ಣನೆಯು ಒಂದು ಚೂರು ಕೇಳಿದರೂ ಅನ್ನಪೂರ್ಣೆಯ ಹೊಟ್ಟೆಗೆ ಬೆಂಕಿ ಹಾಕಿದ ಹಾಗಾಗುತ್ತಿತ್ತು. ಅದರಲ್ಲಿಯೂ ತನ್ನ ಮಗನಿಗೆ ತಪ್ಪಿಹೋಗಿ, ಮಧುರೆಯಲ್ಲಿರುವವರು ಅವಳನ್ನು ಹೊಗಳುವುದನ್ನು ಕೇಳುವಾಗ ಅವಳಿಗೆ ಸೈಸಲಾಗುತ್ತಿದ್ದಿಲ್ಲ. 'ಈ ಹುಡುಗಿ ಮೂರೂ ಮುಕ್ಕಾಲು ಗಳಿಗೆಯೊಳಗೆ, ತಾಳಿ ಕಡಿದುಕೊಂಡು ಬರಬೇಕು. ಆಗತಾನೇ ಇವನ ಗರ್ವ ಅಡಗೀತು! ನನ್ನ ಮಗನೇನು ಕುಂಟನೋ ಕುರುಡನೋ? ರಾಜನಂತೆ ನನ್ನ ಮಗ ಇರುವಾಗ, ಯಾರೋ ಮಧುರೆಯವನಿಗೆ ಹುಡುಗಿಯನ್ನು ಕೊಟ್ಟು ಅವಮಾನ ಮಾಡಿದನಲ್ಲ! ಇವನ ವಂಶ ನಾಶವಾಗಿ ಹೋಗಲಿ!' ಎಂದೆಲ್ಲ ನಾನಾ ಶಾಪ ಹಾಕಿದಳಂತೆ.

ಎರಡು ವರ್ಷವಾಯಿತು. ಆಗ ನನ್ನ ತಂದೆ ದೇವಾರದಲ್ಲಿ ಒಬ್ಬ ಏಲಕ್ಕೀ ವ್ಯಾಪಾರಿಯ ಬಳಿಯಲ್ಲಿ ಲೆಕ್ಕಬರೆಯುವ ಗುಮಾಸ್ತಿಕೆಯಲ್ಲಿದ್ದರು. ನನ್ನ ತಾಯಿ, ತೌರನ್ನು ಕುರಿತು ಯಾರೂ ಕೀಳಾಗಿ ತಿಳಿಯಬಾರದೆಂದು, ಅತ್ತೆಯನ್ನು ಕುರಿತು ನನ್ನ ತಂದೆಯೊಡನೆ ಏನೂ ಹೇಳಲಿಲ್ಲವಂತೆ. ಇಷ್ಟವಿಲ್ಲದಿದ್ದರೂ ನನ್ನ ತಾಯಿ ಪ್ರಥಮ ಪ್ರಸವಕ್ಕೆ ತೌರುಮನೆಗೆ ಬಂದಾಗಲೂ ಅವಳೇನೂ ಕಡಮೆಯಾದವಳಾಗಿರಲಿಲ್ಲ. ಎಷ್ಟೆಲ್ಲ ಅಪಶಕುನ ಮಾಡಬಹುದೋ ಅದಷ್ಟು ಮಾಡಿದಳಂತೆ. ಅದರಿಂದ ನನಗೇನೂ ಆಗಲಿಲ್ಲ. ಆಗಲೇ ನಾನು ಸತ್ತುಹೋಗಿದ್ದರೆ ಇಷ್ಟೆಲ್ಲ ಕಷ್ಟಗಳನ್ನು ಅನುಭವಿಸುವವರು ಯಾರು ಹೇಳು?

ನನ್ನ ತಾಯಿ ಒಳ್ಳೆಯ ಸುಂದರಿ ಎಂದೆನಷ್ಟೇ. ನನ್ನ ತಂದೆ ಸಾಧಾರಣವಾಗಿದ್ದರು. ಕಪ್ಪುಬಣ್ಣ; ನನಗಷ್ಟು ನೆನಪಿಲ್ಲ. ನನ್ನ ತಾಯಿಯ ಹಾಗೆ ನಾನೂ ಹುಟ್ಟಿದ್ದು ಆ ಅನ್ನಪೂರ್ಣತ್ತೆಯ ಹೊಟ್ಟೆಯ ಕಿಚ್ಚಿಗೆ ಹೊಸ ತುಪ್ಪಹಾಕಿದ ಹಾಗಾಯಿತು. ಹೇಗಾದರೂ ಅವಳನ್ನು ಬಾಳಗೊಳಿಸದೆ ಮಟ್ಟಹಾಕಲಿಕ್ಕಾಗಿ ಅವಳು ಸಮಯ ಕಾಯುತ್ತಿದ್ದಳು. ಅವಳ ಎಣಿಕೆ ಕೈಗೂಡಲು ಎರಡು ವರ್ಷ ಹಿಡಿಯಿತು.

ನನ್ನ ತಂದೆ ಏನೋ ಕಾರ್ಯಕ್ಕಾಗಿ ಮಾಯವರಂಗೆ ಹೋಗಿದ್ದರು. ಆಗ ನನಗೆ ಮೂರು ವರ್ಷ. ನನ್ನ ತಂದೆ ಮಾಯವರಂಗೆ ಹೋದದ್ದೂ

ಆಗ ನನಗೇನೋ ಅಸೌಖ್ಯವಾಗಿದ್ದದ್ದೂ ನನ್ನ ತಾಯಿ ನನ್ನಜ್ಜನಿಗೆ ತಿಳಿಸಿದ್ದಳು. ಇದೇ ಸರಿಯಾದ ಸಮಯವೆಂದು, ಅನ್ನಪೂರ್ಣತ್ತೆ ತನ್ನ ಮಗನನ್ನು ಮಾಯವರಂಗೆ ಕಳುಹಿಸಿ, ನನ್ನ ತಾಯಿಯ ನಡತೆಯನ್ನು ಕುರಿತು ದೂರು ಹೇಳುವಂತೆ ಬೋಧನೆ ಮಾಡಿದ್ದಳು. ತಂದೆ ನನ್ನ ತಾಯಿಯನ್ನು ತೊಲಗಿಸಿ ಎರಡನೇ ಮದುವೆ ಮಾಡಿಕೊಳ್ಳಬೇಕೆಂಬುದು ಅವಳ ಎಣಿಕೆ.

ಈ ವಿಷಯ ಬಹಳ ದಿನಗಳವರೆಗೆ ನನ್ನ ತಾಯಿಗೆ ಗೊತ್ತೇ ಇಲ್ಲ. ಮಾಯವರದಿಂದ ಬಂದಂದಿನಿಂದ, ತಂದೆ ಏನೋ ವ್ಯತ್ಯಾಸವಾಗಿರುವಂತೆ ನನ್ನ ತಾಯಿಗೆ ಗೊತ್ತಾಯಿತಂತೆ. ಆದರೆ ನನ್ನ ತಾಯಿ ಒತ್ತಾಯಮಾಡಿ ಕೇಳಲಿಕ್ಕೆ ಭಯಪಟ್ಟಳಂತೆ. ಏನು ಕಾರಣವೆಂದು ತಿಳಿಯಲು ಸಾಧ್ಯವಾದಷ್ಟು ಪ್ರಯತ್ನಪಟ್ಟೂ ತಿಳಿಯದೆ ಹೋಯಿತು.

ಒಂದು ದಿನ ನನ್ನ ತಾಯಿ ಕೋಣೆಯಲ್ಲಿ ಪುಷ್ಪಗಳನ್ನು ಕಟ್ಟುತ್ತಾ ಕುಳಿತಿದ್ದಳಂತೆ. ಹೊರಗೆ ಹೋಗಿದ್ದ ನನ್ನ ತಂದೆ ಆವಸರಪಸರವಾಗಿ ಒಳಗೆ ಬಂದು 'ಇಷ್ಟು ಹೊತ್ತು ಏನುಮಾಡುತ್ತಿದ್ದಿ?' ಎಂದು ಗದರಿಸಿದರಂತೆ.

'ಸಾಯಂಕಾಲ ದೇವಾಲಯಕ್ಕೆ ಹೋಗಲಿಕ್ಕೆ ಮಾಲೆ ಕಟ್ಟುತ್ತಾ ಇದ್ದೇನೆ.'

'ಓಹೋ! ಹಾಗೋ! ನಿನ್ನ ಕಪಟನಾಟಕ ನನಗೆ ಗೊತ್ತಾಗಿದೆ. ಇಲ್ಲಿಂದ ಹೊರಗೆಹೋದ ಮನುಷ್ಯ ಯಾರು?'

'ಮನುಷ್ಯನಾ? ಒಬ್ಬರೂ ಇಲ್ಲವಲ್ಲ! ಮಗುವನ್ನು ಮಲಗಿಸಿ ಹೂಕಟ್ಟಲು ಕುಳಿತೆ. ನೀವು ಬಂದದ್ದಷ್ಟೇ ಗೊತ್ತು.'

'ಛೀ! ಛೀ! ಕಳ್ಳನಾಯಿ! ನನ್ನ ಕಣ್ಣಿಂದ ನೋಡಿದೆ. ಅವನು ಮೆಟ್ಟಿಲಿನಿಂದ ಕಳ್ಳನ ಹಾಗೆ ಸುತ್ತಿ ಸುತ್ತಿ ಓಡಿದನಲ್ಲ! ನನ್ನ ಹತ್ತಿರ ಕತೆ ಹೇಳುತ್ತೀಯಾ?' ಅಂದರಂತೆ. ಅನಂತರ ನಡೆದ ಮಾರಾಮಾರಿಯಲ್ಲಿ ನನ್ನ ತಾಯಿ ಮೂರ್ಛೆಬಿದ್ದಳಂತೆ. ಅವಳನ್ನು ಹಾಗೆಯೇ ಬಿಟ್ಟು ನನ್ನ ತಂದೆ ಎಲ್ಲಿಗೋ ಹೋಗಿಬಿಟ್ಟರು.

ಮತ್ತೆ ಬೇಗದಲ್ಲಿ ಅನಪೇಕ್ಷಿತರೀತಿಯಲ್ಲಿ ಸತ್ಯಸಂಗತಿ ಹೊರಪಟ್ಟಿತು. ನಾವು ಬಾಡಿಗೆಗಿದ್ದ ಮನೆಯ ಒಡೆಯನು, ಆ ಮನೆಯನ್ನು ಮಾರುವಾಗ,

ತೆಗೆದುಕೊಳ್ಳುವವನ ತಮ್ಮನೂ ಬಂದಿದ್ದನು. ಅವನು, ಒಂದು ದಿವಸ ತನ್ನನ್ನು ಒಂದು ದೊಡ್ಡ ಆಪತ್ತಿನಿಂದ ಈ ಮನೆ ಕಾಪಾಡಿತೆಂದೂ, ತನ್ನ ವಿರೋಧಿಯೊಬ್ಬ ತಾನೊಬ್ಬನೇ ಸಿಕ್ಕಿದಾಗ ತನ್ನನ್ನು ತಿವಿದು ಕೊಲ್ಲುವುದಾಗಿ ಹೇಳಿದ್ದನೆಂದೂ, ಅಂದು ಅಕಸ್ಮಾತ್ತಾಗಿ ಅವನು ಬೀದಿಯಲ್ಲಿ ತನ್ನನ್ನು ಅನುಸರಿಸಿ ಬರುವುದನ್ನು ಕಂಡು, ಹೆದರಿ ಈ ಮನೆಯ ಹಿಂಬಾಗಿಲಿನ ಹಿಂದೆ ಅಡಗಿಕೊಂಡೆನೆಂದೂ, ಅವನು ಹೊರಟು ಹೋದನೆಂದು ನಿಶ್ಚಯ ವಾದ ಮೇಲೆ, ಹೊರಗೆ ಬಂದು ಓಡಿ ತಪ್ಪಿಸಿಕೊಂಡೆನೆಂದೂ ತಿಳಿಸಿದನು.

ಈ ಸಂಗತಿ ತಿಳಿದಮೇಲೆ ನನ್ನ ತಾಯಿ ಅವನೊಡನೆಯೇ ವಿಷಯ ವನ್ನು ಹೇಳಿ, ತನ್ನ ವಿಧಿಯನ್ನು ಹಳಿದುಕೊಂಡು ಅತ್ತಳು. ಅವನು ತನ್ನ ಜೀವವಿರುವವರೆಗೆ ಎಲ್ಲಿಯಾದರೂ ಹುಡುಕಾಡಿ, ನನ್ನ ತಂದೆಯನ್ನು ಹುಡುಕಿ ಕರೆತರುವುದಾಗಿ ಹೇಳಿದನು. ಆದರೆ ನಮ್ಮ ದುರ್ಭಾಗ್ಯದಿಂದ ಅವನು ಮರುತಿಂಗಳಿನಲ್ಲಿ ಕಾಲುವೆಯಲ್ಲಿ ಬಿದ್ದು ಸತ್ತುಹೋದನು.

ನನ್ನ ಅಜ್ಜನಿಗೆ ಕಾಗದದ ಮೇಲೆ ಕಾಗದ ಹಾಕಿದರೂ ಮಾರುತ್ತರ ಬರೆಯಲೇ ಇಲ್ಲ. ನನ್ನ ತಾಯಿ ಅವರನ್ನು ಮುಖತಃ ಕಂಡು ಸಂಗತಿ ಯನ್ನೆಲ್ಲ ತಿಳಿಸೋಣವೆಂದು, ಅಲ್ಲಿಗೆ ಪ್ರಯಾಣಮಾಡಿದಳು. ಆದರೆ ಅದೇ ಸಮಯದಲ್ಲಿ ಅವರು ಫಕ್ಕನೆ ಪ್ಲೇಗು ಬಂದು ತೀರಿಹೋದರೆಂದು ವರ್ತ ಮಾನ ಬಂತು. ನಾವಿಬ್ಬರೂ ಹೋಗಿ ಮುಟ್ಟಿದಾಗ, ಅನ್ನಪೂರ್ಣತ್ತೆಗೂ ಪಂಚೂಗೂ ಪ್ಲೇಗ್ ಬಂದಿತ್ತು. ಅಂತ್ಯಕಾಲದಲ್ಲಿ ಪಂಚೂಗೆ ಏನು ತೋರಿತೋ ಏನೋ, ಮಾಯವರದಲ್ಲಿ ತಾನೆಸಗಿದ ತಂತ್ರವನ್ನೆಲ್ಲಾ ಹೇಳಿ ಕ್ಷಮೆ ಕೇಳಿಕೊಂಡ.

ಹಣ-ಜನ ಒಂದೂ ಇಲ್ಲದೆ, ನಾಲ್ಕು ವರ್ಷದ ಮಗುವನ್ನು ಕಟ್ಟಿ ಕೊಂಡು ನಿಲ್ಲುವುದೆಲ್ಲಿ? ಏನೋ ಪುಣ್ಯದಿಂದ, ನನ್ನ ತಂದೆ ಕೆಲಸಮಾಡಿದ್ದ ಏಲಕ್ಕೀ ವ್ಯಾಪಾರಿ, ಸಂಗಮೇಶ್ವರಯ್ಯರು, ನನ್ನ ತಾಯಿಯ ಗತಿಯನ್ನು ಕಂಡು ಮನಸ್ಸು ಕರಗಿ, ತಿಂಗಳಿಗೆ ಐದು ರೂಪಾಯಿ ಸಂಬಳ ಗೊತ್ತು ಮಾಡಿ ತಮ್ಮಲ್ಲಿ ಅಡಿಗೆಗಾಗಿ ಇಟ್ಟುಕೊಂಡರು. ಅವರ ಹೆಂಡತಿ ಗೌರಮ್ಮ, -ಧರ್ಮದೇವತೆಯೆಂದರೆ ಅವರೇ ಸರಿ- ನನ್ನನ್ನೂ ನನ್ನ ತಾಯಿಯನ್ನೂ ಹೆತ್ತವ್ವನಿಗಿಂತ ಹತ್ತು ಮಡಿಯಾಗಿ ಆದರಿಸಿದರು.

ಕಣ್ಣು ಕೆಡಿಸಿದ ದೈವವು ಬುದ್ಧಿ ಬೆಳಗಿಸಿತು' ಎಂಬಂತೆ ಕಷ್ಟಕಾಲದಲ್ಲಿ ನಿಧಿ ಸಿಕ್ಕಿದ ಹಾಗಿತ್ತು.

ನನ್ನ ವಿದ್ಯೆಗೆ ಹಣವು ನನ್ನ ತಾಯಿಯ ಸಂಬಳವೆ. ಊಟ ಅವರ ಮನೆಯಲ್ಲಿಯೇ. ಮೇಲುವಿದ್ಯೆಗೆ ಮಧುರೆಯಲ್ಲಿ ನನಗೆ ವಾರದ ಮನೆಯನ್ನು ಗೊತ್ತುಮಾಡಿದ್ದರು. ಆರನೆಯ ಫಾರಂ ಪಾಸಾದಮೇಲೆ ಅವರು ನನ್ನನ್ನು ಕರೆದು, 'ಅಪ್ಪಾ ಜಗದೀಶಾ! ಇಷ್ಟಕ್ಕೆ ಓದನ್ನು ಮುಗಿಸಿ, ಲೆಕ್ಕದ ಕೆಲಸ ನೋಡುತ್ತೀಯಾದರೆ, ತಿಂಗಳಿಗೆ ಇಪ್ಪತ್ತುರೂಪಾಯಿ ಕೊಡುತ್ತೇನೆ, ಸಮ್ಮತಿಯೆ?' ಎಂದು ಕೇಳಿದರು.

ಮರುತಿಂಗಳಿಂದ ನಾನೂ ನನ್ನ ತಾಯಿಯೂ ಒಂದು ಸಣ್ಣ ಮನೆಯಲ್ಲಿ ಬಾಡಿಗೆಗಿರಲಾರಂಭಿಸಿದೆವು. ನನ್ನ ತಾಯಿಯ ಸಂಬಳದಲ್ಲಿ ಮಿಕ್ಕಿದ್ದ ಇನ್ನೂರು ರೂಪಾಯಿಯನ್ನು ಅವರು ನನ್ನ ಕೈಗೆ ಕೊಟ್ಟು ಬಡ್ಡಿಗೋ ಭೂಮಿಯ ಹೆಸರಿನಲ್ಲಿಯೋ ಕೊಡುವಂತೆ ಹೇಳಿದರು.

ಹೀಗೆಯೇ ಐದು ವರ್ಷವಾಯಿತು. ನಾವೂ ಕೊಂಚ ಕೊಂಚವಾಗಿ ಮುಂದಕ್ಕೆ ಬರಲಾರಂಭಿಸಿದೆವು. ಈ ಸಮಯದಲ್ಲಿ 'ಕನ್ನಿಂಗ್ ಹಾಂ ಎಂಬೊಬ್ಬ ದೊರೆ, ಏಲಕ್ಕಿಯ ದಳ್ಳಾಳಿಯನ್ನು ವಹಿಸಿಕೊಂಡು ದೇವಾರದಲ್ಲಿಯೇ ಇದ್ದ. ಅವನು ಇದ್ದಕ್ಕಿದ್ದಂತೆ ಹೃದಯ ದೌರ್ಬಲ್ಯದಿಂದ ಸಾಯಲು, ಅವನ ಹೆಂಡತಿ ಮನೆಯಲ್ಲಿದ್ದ ಸಾಮಾನುಗಳನ್ನೆಲ್ಲಾ ಏಲಂ ಹಾಕಿ ಸ್ಕಾಟ್ಲಂಡಿಗೆ ಹೊರಟಳು. ಅದರಲ್ಲಿ ನಾನೊಂದು ಮರದ ಬೀರುವನ್ನು ಹತ್ತು ರೂಪಾಯಿಗೆ ಪಡೆದೆನು. ಬಹುಕಾಲದವರೆಗೆ ಅದರಲ್ಲಿ ಅಗಸರ ಬಟ್ಟೆಯನ್ನೂ, ಪುಸ್ತಕಗಳನ್ನೂ ಇಟ್ಟುಕೊಂಡಿದ್ದೆ. ಒಂದು ದಿನ ನನ್ನ ತಾಯಿ ಅದರಲ್ಲೇನೋ ಅಡಗಿಸಿಡಲೆತ್ನಿಸಿದಾಗ, ಅದರಲ್ಲೊಂದು ಕಳ್ಳ ಅರೆ ಇದ್ದುದನ್ನೂ ಅದರೊಳಗೆ ಹತ್ತು ನೂರು ರೂಪಾಯಿಯ ನೋಟುಗಳಿದ್ದುದನ್ನೂ ನೋಡಿದಳು. ಅದನ್ನು ಹೊರಗೆ ತಿಳಿಸಿದರೆ ಆಪತ್ತಾದೀತೆಂದೂ, ಯಾರಿಗೂ ತಿಳಿಸಬಾರದೆಂದೂ ಹೇಳಿದಳು.

ಇದಾದ ಒಂದು ವರ್ಷಕ್ಕೆ ಸಂಗಮೇಶ್ವರಯ್ಯರು ತೀರಿಹೋದರು. ಕೆಲಸಬಿಟ್ಟ ನಾನು ಕೈಯಲ್ಲಿ ಸಾವಿರದೈನೂರು ರೂಪಾಯಿಯೊಂದಿಗೆ ವ್ಯಾಪಾರ ಮಾಡಬೇಕೆಂದು ಮಧುರೆಗೆ ಹೋದೆ.

ನನಗೆ ಯಾವಾಗಲೂ ಚಿತ್ರ ಬರೆಯುವುದರಲ್ಲಿಯೂ, ಕತೆಗಳನ್ನು ಬರೆಯುವುದರಲ್ಲಿಯೂ ಅಧಿಕವಾದ ಉತ್ಸಾಹ. ಲೆಕ್ಕ ಬರೆಯುವ ಕೆಲಸದಲ್ಲಿ ಒಂದು ನಿಮಿಷವಾದರೂ ಬಿಡುವಿದ್ದೀತೆ? ಆದರೂ ಬಿಡುವಿದ್ದಾಗ ಲೆಲ್ಲಾ ಇಂಗ್ಲೀಷಿನಲ್ಲಿಯೂ ತಮಿಳಿನಲ್ಲಿಯೂ ಏನು ಪುಸ್ತಕ ಸಿಕ್ಕಿದರೂ ಓದುತ್ತಾ ಇದ್ದೆ. ಈ ಅನುಭವದಿಂದ ಈ ಕಾಲಕ್ಕೆ ತಕ್ಕಹಾಗೆ ಪತ್ರಿಕೆಯೊಂದು ಹೊರಡಿಸುವ ಆಲೋಚನೆ ನನಗೆ ಬಂತು. ಆದರೂ ನನಗೆ ಪರಿಚಿತರಾದ ದೊಡ್ಡವರೂ ಅನುಭವವುಳ್ಳವರೂ ಯಾರೂ ಇಲ್ಲದ್ದರಿಂದ, ಸಾಹಸಮಾಡಿ ಒಂದು ದಾರಿಯಲ್ಲಿಯೂ ಇಳಿಯಲಾರದೆ ತತ್ತರಿಸಿದೆ.

ಒಬ್ಬ ಸಾಮುದ್ರಿಕ ಶಾಸ್ತ್ರಿಗಳು ನನಗೆ ಸ್ನೇಹಿತರಾದರು. ಅವರು ನನ್ನ ಕೈಗಳನ್ನು ನೋಡಿ, 'ಪತ್ರಿಕೆಯ ಕೆಲಸವೇ ಒಳ್ಳೆಯದು. ಖಂಡಿತ ವಾಗಿ ಒಳ್ಳೆಯದಾಗುತ್ತದೆ' ಎಂದಂದು ನನ್ನನ್ನು ಉತ್ಸಾಹಪಡಿಸಿದರು. ಕಡೆಗೆ ಮಧುರೆಯಲ್ಲಿ ತಿಂಗಳಿಗೊಮ್ಮೆ ಕೂಡ ಸರಿಯಾಗಿ ಹೊರಡಲಾಗದೆ ಕಷ್ಟಪಡುತ್ತಿರುವ 'ಪ್ರಬೋಧ ಚಂದ್ರಿಕಾ' ಪತ್ರಿಕೆಯ ಸಂಪಾದಕರನ್ನು ಹೋಗಿ ನೋಡಿದೆ. ಅವರು ಪತ್ರಿಕೆಯನ್ನು ಮಾರಿಬಿಡುವುದಾಗಿಯೂ ಇನ್ನೂರು ರೂಪಾಯಿ ಕೊಟ್ಟರೆ, ಎಲ್ಲ ಹಕ್ಕೂ ಕೊಟ್ಟುಬಿಡುವುದಾಗಿಯೂ ಹೇಳಿದರು. ನಾನು ಅದನ್ನು ಬೆಲೆಗೆ ಪಡೆದು, ಅದರಲ್ಲಿದ್ದ ಗೊಡ್ಡು ಪುರಾಣ ವೇದಾಂತಾದಿಗಳನ್ನೆಲ್ಲ ಕತ್ತರಿಸಿಹಾಕಿ, ನವೀನ ರೀತಿಯಾಗಿ ಪ್ರಕಟಿಸ ಲಾರಂಭಿಸಿದೆನು. ಮೊತ್ತ ಮೊದಲು 'ಕಮಲೆಯ ಪ್ರೇಮ' ಎಂಬ ಹೆಸರಿ ನಿಂದ ನನ್ನ ತಾಯಿಯ ಕತೆಯನ್ನೆ ಬರೆದು, ತಂದೆ ಓಡಿದಲ್ಲಿಗೆ ಸಿಲ್ಲಿಸಿಬಿಟ್ಟೆ. ಈಗ ನನ್ನ 'ಚಂದ್ರಿಕಾ' ತಿಂಗಳಿಗೆರಡುಬಾರಿ ಬರುತ್ತಿದ್ದಾಳೆ······" ಎಂದು ಹೇಳುವಾಗ "ಚಂದ್ರಿಕಾ ಸಂಪಾದಕರು ನೀವೇನಾ?" ಎಂದು ಕಣ್ಣಗಲಿಸಿ ಕೇಳಿದನು ರಂಗ.

ಜಗದೀಶನೆಂದ:—

"ಪ್ರಬೋಧ— ಎಂಬುದರಿಂದ ವೇದಾಂತದ ಭೀತಿ ಜನರಿಗೆ ಹುಟ್ಟ ಬಾರದೆಂದು 'ಚಂದ್ರಿಕಾ' ಎಂದಷ್ಟೇ ಹೆಸರಿಟ್ಟದ್ದೇನೆ. ಅದು ಮೊದಲು ಪತ್ರಿಕೆ ತುಂಬ ಅಭಿವೃದ್ಧಿಯಾಗಿ ತಮಿಳ್ನಾಡಿನಲ್ಲೆ ಹರಡಿದೆ.

ಇವಕ್ಕೂ ಹೆಚ್ಚುಮಾಡಲು ಮಧುರೆಯಲ್ಲಿ ಸಾಧ್ಯವಿಲ್ಲದ್ದರಿಂದ, ಚಂದ್ರಿಕಾ'ವನ್ನು ವಾರಪತ್ರಿಕೆಯಾಗಿ ಮಾಡಬೇಕೆಂದೂ, ಮದರಾಸಿಗೆ ಕಾರ್ಯಾಲಯವನ್ನು ಬದಲಿಸಬೇಕೆಂದೂ ಅಲ್ಲಿಗೆ ಹೋಗಿದ್ದೆ. ಎಲ್ಲಾ ಏರ್ಪಾಡೂ ತೃಪ್ತಿಯಾಗಿಯೇ ಆಗಿದೆ. ನಾನು ಮದರಾಸಿಗೆ ಹೊರಟಾಗ ನನ್ನ ತಾಯಿಯನ್ನು ದೇವಾರಕ್ಕೆ ಕಳಿಸಿದ್ದೆ. ದೇವಾರದಿಂದ ನನ್ನ ತಾಯಿಯನ್ನು ಕರಕೊಂಡು ಹೋಗಲಿಕ್ಕಾಗಿಯೇ ಅಲ್ಲಿಗೆ ಹೋಗುತ್ತೇನೆ. ಅಲ್ಲಿಂದ ಮದರಾಸಿಗೆ ಬದಲಾಯಿಸುವ ಏರ್ಪಾಡುಗಳನ್ನು ಮಾಡಿಕೊಂಡು, ಒಂದೇ ಬಾರಿ ಮದರಾಸಿಗೆ ಹೋಗಿಬಿಡಬೇಕು'' ಎಂದು ಹೇಳಿ ಜಗದೀಶನು ತನ್ನ ಕತೆಯನ್ನು ಮುಗಿಸಿದನು.

# ದೇವಾರ

ದೇವಾರವು ಬಹು ಚೆಲುವಾದ ಗ್ರಾಮವಾಗಿತ್ತು. ಅದರ ಸುತ್ತಲೂ ಕಾಣಬರುವ ಸಣ್ಣ-ದೊಡ್ಡ ಗುಡ್ಡದ ಸಾಲುಗಳೂ, ಹಸುರು ಮುರಿದು ನಳನಳಿಸುವ ಹೊಲಗಳೂ ಪ್ರಕೃತಿರಾಣಿಯ ಸೌಂದರ್ಯವನ್ನು ಹತ್ತುಮಡಿ ಮಿಗಿಲಾಗಿ ತೋರಿಸುತ್ತಿದ್ದುವು. ಅಲ್ಲಿ ಹೊಲಗಳಿಗೆ ಕಾಲುವೆಯಾಗಿ ಉಪಯೋಗಿಸುವ ನೀರೆಲ್ಲಾ 'ಸುರುಳಿ' ಎಂಬ ಕಾಡು ತೊರೆಯ ನೀರೇ. ಆ ಬಗೆಯ ಪ್ರಕೃತಿಸೌಂದರ್ಯವನ್ನು ರಂಗನು ಈ ಮೊದಲೆಂದೂ ಕಂಡಿರಲಿಲ್ಲ. ಆದುದರಿಂದ ಅವನು ಅರಿಯದೆಯೇ ಅವನ ಹೃದಯವು ತುಂಬಿಬಂತು. ಜೀವ ಬಿಡಬೇಕೆಂದಿದ್ದ ತನ್ನನ್ನು ಕಾಪಾಡಿ, ಈ ಬಗೆಯ ದಿವ್ಯ ಸೌಂದರ್ಯದ ಬೀಡನ್ನು ತೋರಿಸಿದ ದೇವರ ದಯೆಯನ್ನು ನೆನೆದು ನೆನೆದು ಪುಳಕಾಂಗಿತನಾದನು. ಜಗದೀಶನ ಸಮಯೋಚಿತ ಬೋಧನೆಯಂತೆ, ಮೊನ್ನೆಯೇ ತಂದೆಗೆ ಬರೆದಿದ್ದ ಕಾಗದವು ಈಗ ಅವರಿಗೆ ಸಿಕ್ಕಿ ಅವರೂ ತನ್ನ ಕ್ಷೇಮವನ್ನು ತಿಳಿದು ಸಂತೋಷಪಡುವರೆಂಬುದನ್ನು ಯೋಚಿಸಿದಾಗ, ಅವನು ಒಳಗೂ ಹೊರಗೂ ಅರಳಿದವನಾಗಿ ಜಗದೀಶನನ್ನು ಮುಗುಳ್ನಗೆಯಿಂದ ನೋಡಿದನು.

"ಏನು ರಂಗಾ? ನಿನ್ನಷ್ಟಕ್ಕೆ ನೀನೆ ನಗುತ್ತೀ? ನಮ್ಮ ತಾಯಿ ನಿನಗೆ ಒಪ್ಪಿದಳೊ?" ಎಂದು ಕೇಳಿ, "ಅಮ್ಮ, ಈ ಹುಡುಗನಿಗೆ ಕೊಂಚ ತಿಂಡಿ ಕೊಡು" ಎಂದನು.

"ಇಕೊ, ಇಬ್ಬರಿಗೂ ತೆಗೆದಿಟ್ಟಿದ್ದೇನೆ. ನೀನು ಬರುತ್ತೀ ಅಂತ ತಿಳಿದು ಬೆಲ್ಲದ ಮನೋಹರವನ್ನೂ, ಅತಿರಸವನ್ನೂ ಮಾಡಿದ್ದೇನೆ" ಎಂದು ಎರಡು ತಟ್ಟೆಗಳಲ್ಲಿ ತಿಂಡಿಗಳನ್ನು ತಂದುಕೊಟ್ಟಳು ಶೆಲ್ಲಮ್ಮ.

ಅನಂತರ "ಈ ಹುಡುಗ ಯಾರು? ಎಲ್ಲಿಯೋ ನೋಡಿದ ಮುಖವಾಗಿದೆಯಲ್ಲ?" ಎಂದಳು.

"ದಾರಿಯಲ್ಲಿ ಕಂಡುಹಿಡಿದು ಕರಕೊಂಡುಬಂದೆ."

"ಅವನೇನು ಹುಲಿಯೊ ಕರಡಿಯೊ ಹಿಡಿದುಕೊಂಡು ಬರಲಿಕ್ಕೆ? ಇನ್ನೂ ನಿನ್ನ ಹುಡುಗಾಟಿಕೆ ಹೀಗೇ ಇದೆ" ಎಂದು ಅವನ ಕೆನ್ನೆಗಳನ್ನು ತಡವಿ ದೃಷ್ಟಿ ಮುರಿದಳು.

"ಏನಪ್ಪಾ, ಈ ಹುಡುಗ ಯಾವ ಕೆಲಸಕ್ಕಾಗಿ ಬಂದಿದ್ದಾನೆ? ಯಾರ ಮನೆ ಹುಡುಗ?"

"ಅಷ್ಟರೊಳಗೇನವಸರವಮ್ಮ? ನನಗೆ ತುಂಬ ದಿನದಿಂದಲೂ ಒಡಹುಟ್ಟಿದವರಿಲ್ಲವೆಂಬ ಕೊರತೆಯಿತ್ತು. ಆದ್ದರಿಂದ ಇವನನ್ನು ತಮ್ಮ ನಾಗಿ ಸ್ವೀಕರಿಸಿಕೊಳ್ಳೋಣವೆಂದು ಕರಕೊಂಡು ಬಂದೆ. ಇದರಿಂದ ನಿನಗೇನೂ ಆಕ್ಷೇಪವಿಲ್ಲಷ್ಟೆ?"

ಶಿಲ್ಲಮ್ಮ ಯೋಚನೆಮಾಡಲಾರಂಭಿಸಿದಳು. ಕೆಲವು ದಿನಗಳ ಕೆಳಗೆ ಒಬ್ಬಳು ಕೊರವಂಜಿಗೆ ತನ್ನ ಕೈರೇಖೆಯನ್ನು ತೋರಿಸಿದ್ದೂ, ಅವಳು "ಬೇಗದಲ್ಲಿಯೇ ಗಂಡನನ್ನು ಸಂಧಿಸುತ್ತೀ. ಆದರೆ ಅವರಿಂದ ನಿನಗೇನೂ ಉಪಯೋಗವಿಲ್ಲ. ನಿನ್ನ ಮಗ ಚೆನ್ನಾಗಿ ಸಂಪಾದನೆಮಾಡಿ ಸುಖಜೀವಿ ಯಾಗುತ್ತಾನೆ" ಎಂದು ಹೇಳಿದ್ದೂ ಅವಳ ಮಾನಸಲೋಚನಕ್ಕೆ ಗೋಚರಿ ಸಿತು. ಒಂದುವೇಳೆ ತನ್ನನ್ನು ತ್ಯಜಿಸಿ ನಡೆದ ಗಂಡನು ತಂಜಾವೂರಿನಲ್ಲಿ ಬೇರೆ ಮದುವೆ ಮಾಡಿಕೊಂಡು ಬಾಳುವೆ ಸಾಗಿಸುತ್ತಾರೋ? ಈ ಹುಡುಗ ನನ್ನ ಸವತಿಯ ಮಗನಾಗಿದ್ದಾನೊ? ಜಗದೀಶ ಕಂಡುಹಿಡಿದು ಕರಕೊಂಡುಬಂದನೋ? ಅಥವಾ ಅವರೇ ಬಡತನಕ್ಕೆ ಬಿದ್ದು, ಜಗದೀಶ ನನ್ನು ಹುಡುಕಿ, ಇವನು ಒಳ್ಳೆಯ ಸ್ಥಿತಿಯಲ್ಲಿರುವುದನ್ನರಿತುಕೊಂಡು ಮದರಾಸಿಗೆ ಬಂದಿದ್ದಾರೊ?" ಎಂದೇನೋ ಯೋಚನೆ ಮಾಡ ತೊಡಗಿದಳು.

ಅರಳಿಕೊಂಡಿದ್ದ ಅವಳ ಮುಖವು ಒಂದು ನಿಮಿಷದೊಳಗೆ ವ್ಯಸನ ದಿಂದ ವಿಕಲವಾಗುತ್ತಿರುವುದನ್ನು ಜಗದೀಶನು ನೋಡಿದನು. ಅವಳು ಒಳಗೆ ಹೋಗುತ್ತಲೇ ತಿಂಡಿ ತಿಂಬುದನ್ನು ನಿಲ್ಲಿಸಿ, ಜಗದೀಶನು ಅವಳೊಂದಿಗೇ ಅಡಿಗೇ ಮನೆಗೆ ಹೊಕ್ಕು, "ಏನಮ್ಮ?" ಎಂದ. ಅವಳು ಸಣ್ಣ ಸ್ವರದಲ್ಲಿ "ನಿನ್ನ ತಂದೆಯನ್ನು ಕಂಡೆಯಾ?" ಎಂದಳು.

"ತಂದೆಯನ್ನು? ನಾನು? ಇಲ್ಲಮ್ಮ. ತಂದೆಯನ್ನು ಕಂಡೆನೆಂದು ನಾನು ನಿನಗೆ ಹೇಳಿದೆನೆ?"

"ಹಾಗಾದರೆ ಈ ಹುಡುಗ ಯಾರು?"

"ನೀನು ಯಾರೆಂದು ನೆನೆಸಿದಿ?"

ಶೆಲ್ಲಮ್ಮ ತನ್ನ ಮನಸ್ಸಿಗೆ ತಟ್ಟಿದ ಸಂದೇಹವನ್ನು ಹೇಳಿದಳು. “ಫು! ಹೀಗೋ ನೆನೆಸಿದಿ? ಅವರನ್ನು ನೋಡಿದ್ದರೆ ನಿನಗೆ ಮೊದಲೇ ಹೇಳದೆ ಬಿಡುವೆನೆ?” ಎಂದಂದು, ರಂಗನು ಪನಂಗುಡಿ ಪತಂಜಲಿ ಶಾಸ್ತ್ರಿಗಳ ಎರಡನೇ ಮಗ ಎಂಬ ಸಂಗತಿಗಳನ್ನು ವಿವರವಾಗಿ ಹೇಳಿದನು.

ಶೆಲ್ಲಮ್ಮನಿಗೆ ೪೫ ವಯಸ್ಸಿದ್ದೀತು. ಅಷ್ಟು ಕಷ್ಟಗಳನ್ನನುಭವಿಸಿದರೂ ಅವಳ ಮುಖವು ಇನ್ನೂ ಶೋಭಾಯಮಾನವಾಗಿಯೇ ಬೆಳಗುತ್ತಿತ್ತು. ಎಳೆ ನರೆಯಿಂದ ಹಣೆಯ ಮೇಲೆ ಉರುಳುವ ಮುಂಗುರುಳುಗಳು ಅವಳ ಮುಖಕ್ಕೊಂದು ಕಾಂತಿಯನ್ನಿತ್ತಿದ್ದುವು. ಎಳವೆಯಲ್ಲಿ ಅವಳು ಎಷ್ಟು ಸುಂದರಿಯಾಗಿದ್ದಿರಬೇಕೆಂದು ರಂಗನು ಕಲ್ಪನೆಯಿಂದಲೇ ಊಹಿಸಿಕೊಳ್ಳಲಾರಂಭಿಸಿದನು.

ಹೊರನೋಟಕ್ಕೂ ಹತ್ತುಮಡಿ ಮಿಗಿಲಾಗಿ ಅವಳ ಹೃದಯವು ಮಧುರವಾಗಿತ್ತೆಂಬುದನ್ನು ಎಣಿಸಿದಾಗ, ಇಂಥವರ ಯೋಗವನ್ನು ಒದಗಿಸಿದ ದೇವರಿಗೆ ಮನಸಾ ವಂದಿಸಿದನು. “ದೇವಾರದಲ್ಲಿ ಹತ್ತು–ಪದಿನೈದು ದಿನ ಕೆಲಸವಿದೆ” ಎಂದು ಜಗದೀಶನಂದುದು ಇವನಿಗೆ ತುಂಬಾ ಸಂತೋಷದಾಯಕವಾಗಿತ್ತು.

ಅವನ ವೃತ್ತಾಂತವನ್ನರಿತ ಶೆಲ್ಲಮ್ಮ ಅವನನ್ನು ತುಂಬ ಪ್ರೀತಿಯಿಂದ ಕಾಣಲಾರಂಭಿಸಿದಳು. ಶಾಂತಿ–ಕರುಣೆಗಳು ಜತೆಗೂಡಿದ ಅವಳ ನೋಟವು ರಂಗನಲ್ಲಿ ತುಂಬ ಭಯ ಭಕ್ತಿಯನ್ನು ಹುಟ್ಟಿಸಿತು. ಅವಳೊಬ್ಬಳು ತಪಸ್ವಿನಿಯಂತೆ ತೋರಿದಳು.

ಮುಂಜೆ–ಸಂಜೆಗಳಲ್ಲಿ ಅವಳು ಪೂಜಾಗೃಹದಲ್ಲಿ, ತಾಯುಮಾನವರು, ಪಟ್ಟಿನತ್ತಾರ್ ಮೊದಲಾದವರ ಗೀತಗಳನ್ನು ಹಾಡುತ್ತ ಪರವಶಳಾಗುತ್ತಿದ್ದಳು. ಈ ಇಳಿವಯಸ್ಸಿನಲ್ಲಿ ಎಳೆಮೆಯ ಸುಂದರ ಶಾರೀರವಿರುವುದನ್ನು ಕಂಡು ಆಶ್ಚರ್ಯವಾಗುತ್ತಿತ್ತು. ಅವಳು ನಡೆದು ಬಂದಾಗ, ನಿರ್ಭಾಗ್ಯವತಿಯಾಗಿ ಚಿತ್ತಸ್ವಾಧೀನವಿಲ್ಲದೆ ತತ್ತರಿಸುವ ತನ್ನ ತಾಯಿಯನ್ನು ನೆನೆದು ರಂಗನು ಕಂಬನಿ ಬಿಡುವನು.

ಜಗದೀಶನ ಕೆಲಸಗಳು ಹೆಚ್ಚು ಕಡಮೆ ಮುಗಿದುಬಿಟ್ಟುವು. ಆಗ ಅಕಸ್ಮಾತ್ತಾಗಿ ಸಂಗಮೇಶ್ವರಯ್ಯರ ಗಂಡು ಮಕ್ಕಳನ್ನು ಕಂಡ ರಂಗನು,

ಅವರ ಆಡಂಬರದ ಮಾತು–ರೀತಿಗಳಿಗೆ ಮೋಹಿಸಿ, ತನ್ನ ತಂಗಿ ಶ್ಯಾಮಳೆಗೆ ಅಂತಹ 'ವರ' ಸಿಕ್ಕಬಹುದೋ ಎಂದು ಯೋಚಿಸುತ್ತ, ಜಗದೀಶನೊಡನೆ ಪ್ರಸ್ತಾವಿಸಲು ಸಮಯ ಕಾದುಕೊಂಡಿದ್ದನು.

ಅಂಗಳದಲ್ಲಿ ಹಗ್ಗದ ಮಂಚದಲ್ಲಿ ಜಗದೀಶನು ಕುಳಿತಿದ್ದನು. ಜಗುಲಿಯಲ್ಲಿ ಕಂಬಕ್ಕೆ ಒರಗಿಕೊಂಡು ಶೆಲ್ಲಮ್ಮ ಕುಳಿತಿದ್ದಳು. "ಏನಮ್ಮ? 'ಮಾಮಾ' ಅವರ ಮನೆಯ ಸ್ವಾಮಿನಾಥನೂ, ಮುತ್ತುಸ್ವಾಮಿಯೂ ಹ್ಯಾಗಿದ್ದಾರೆ? ಎರಡು ಮೂರು ದಿನದಿಂದಲೂ ನನಗೆ ಅಲ್ಲಿಗೆ ಹೋಗಲಾಗಲಿಲ್ಲ. ನಾಳೆ ಬೆಳಗ್ಗೆಯೇ ಅವರನ್ನು ಕಾಣಬೇಕೆಂದಿದ್ದೇನೆ. ಅವರಿಗೆ ಮದುವೆಯಾಯಿತೆ?"

ಶೆಲ್ಲಮ್ಮ ತಣಿದ ದನಿಯಿಂದ—"ಹುಡುಗರು ಶುದ್ಧ ಪೋಕರಿಗಳು. ಮದುವೆಯೆಲ್ಲಿಯದು? ಯಾರು ತಾನೇ ಹೆಣ್ಣು ಕೊಟ್ಟಾರು? ಹಿಂದು ಮುಂದು ತಿಳಿಯದ ಯಾರಾದರೂ ಕೊಟ್ಟರೆ ಹೋಯಿತು. ಪಾಪ! ಹ್ಯಾಗಾದರೂ ಮಕ್ಕಳಿಗೆ ಮದುವೆಯಾದರೆ ಸಾಕೆಂದು ಹಾರುತ್ತಾಳೆ. ಇದ್ದ ಆಸ್ತಿ ಪೂರಾ ಅಡವು. ಆನೆಯಿದ್ದು ಅರಸಾಳಿದ ಮಂಟಪದಲ್ಲಿ ಬೆಕ್ಕು ಕೂತು ಕೂಗುತ್ತಾ ಇದೆ. ಅವಳಿಗೆ ಮಕ್ಕಳ ನಡತೆ ಶುದ್ಧ ಹಿಡಿಯೋದಿಲ್ಲ. ಆದರೆ ಅವಳಿಗೆ ಬಾಯಿಬಿಡಲಿಕ್ಕೇ ಎಡೆಯಿಲ್ಲ. ಅಂಥ ಮಹಾನುಭಾವರಿಗೆ ಇಂಥ ಹಾಳುಮಕ್ಕಳು ಹುಟ್ಟಬಾರದಿತ್ತು. ಎಲ್ಲ ಹಣೆಯಬರಹ."

"ಅಷ್ಟು ಆಸ್ತಿ ಹ್ಯಾಗೆ ಹೋಯ್ತು? ಕುಡಿತ ಕುಣಿತ ಉಂಟೊ?"

"ಉಂಟೋ ಅಂತೀಯಾ? ಅದರಿಂದಲೇ ಎಲ್ಲಾ ಆರಂಭ. ಪ್ರೋಡಿನಾಯಕನೂರ ಟೀ ತೋಟದ ದೊರೆಯೊಡನೆ ಸ್ನೇಹ. ಮೊದಲು ಅಣ್ಣ, ಆಮೇಲೆ ತಮ್ಮ. ಇಬ್ಬರೂ ಈಗ ಸೀಪಾಯಿ ಕುಡಿಗಾರರೇ. ಮನೆಯಲ್ಲಿದ್ದ ನಗ-ನಟ್ಟು-ಬೆಳ್ಳಿ-ಪಾತ್ರ-ಎಲ್ಲಾ ಹೋಗಿಯಾಯ್ತು. ಮನೆ ಮಾತ್ರ ಅವಳ ಹೆಸರಿನಲ್ಲಿರುವುದರಿಂದ, 'ಅದಕ್ಕೂ ರುಜು ಮಾಡಿಕೊಡು, ಮಾರುತ್ತೇನೆ' ಎಂದು ಗಿರಾಕಿ ಮಾತಾಡುತ್ತಾರೆ. ಅವಳು ಆಗುವುದಿಲ್ಲ ಎನ್ನುತ್ತಾಳೆ. ಮನೆ ರಣಕಳವಾಗಿದೆ. (ರಹಸ್ಯವಾಗಿ) ನಾವೀಗ ಕರೆದರೂ ಅವಳು ಬಂದುಬಿಡುವ ಸ್ಥಿತೀಲಿದ್ದಾಳೆ, ಪಾಪ!"

"ಅಯ್ಯಯ್ಯೋ! ಹ್ಯಾಗೆ ಎದ್ದಿದ್ದ ಕುಟುಂಬ ಹ್ಯಾಗೆ ಬಿದ್ದು ಹೋಯಿತು!" ಎಂದು ನೀಳುಸಿರುಬಿಟ್ಟನು ಜಗದೀಶ.

# ಮದುವೆಯ ವಿಚಾರ

"ಕಷ್ಟಕಾಲವು ಮನುಷ್ಯರಿಗೆ ಬಾರದೆ ಮತ್ತಾರಿಗೆ ಬರುತ್ತದೆ? ಏನೋ ಕೆಲವು ಕಾಲ ಕಷ್ಟದಲ್ಲಿ ಕಳೆದು ಅನಂತರ ಸರಿಯಾಗುತ್ತದೆ. ಆದರೆ ಹೀಗೂ ಉಂಟೆ? ಈ ಮನೆಗೆ ಬಂದಂದಿನಿಂದ ಕಷ್ಟಕ್ಕೆ ಬಿಡುವೇ ಇಲ್ಲವಲ್ಲ! ದೊಡ್ಡ ಮಗ ನಾಗರಾಜ ಬಹಾದ್ದೂರರ ದೊಡ್ಡ ಸೀನ್ ಹಾಗಾಯಿತು. ಸುಂದರಿಯದೂ ರಾಜೂದೂ ಚಿಕ್ಕ ಸೀನು. ಈಗ ರಂಗನಾಥನದು. ಅಯ್ಯೋ! ಒಂದು ಹುಡುಗಿ ಓಡಿಹೋಯಿತೆಂದರೆ, ಅದರ ಬಾಲದ ಹಾಗೆ ಇದೂ ಹೋಗಬೇಕೆ? ಕೆಟ್ಟ ಕೇಡಿ ಕತ್ತೆಗಳು! ಈ ಮನೆಯ ಮೆಟ್ಟಲು ಹತ್ತಲಿ! ಕಾಲೇ ಮುರಿದುಹಾಕುತ್ತೇನೆ!......" ಎಂದು ಉಗ್ರಸ್ವರ ದಿಂದ ಬೈದಾಡಿಕೊಂಡಿದ್ದರು ಪತಂಜಲಿ ಶಾಸ್ತ್ರಿಗಳು.

"ಅಪ್ಪಾ, ಎಲೊ ಅಪ್ಪಾ! ಖಾಲಿ ಮೂಟೆಗೆ ಕುತ್ತಿದರೆ ಅಕ್ಕಿ ಹೊರಟೀತೆ? ಕಾಲವ್ಯತ್ಯಾಸದಿಂದ ಹೀಗೆಲ್ಲಾ ಆಗುತ್ತದೆ. ಸೈರಿಸಿಕೋ! ನೀನು ಹೀಗೆ ಕೂಗಾಡಿಕೊಂಡಿದ್ದರೆ ಮನೋವೇದನೆಯೇ ಅಧಿಕವಾಗು ವುದು. ನಿನ್ನ ದೊಂಡೆ ಕೇಳಿದರೆ ನನಗೂ ಓಡಿಬಿಡೋಣವೆನಿಸುತ್ತದೆ. ಗುಡ್ಡದ ಹಾಗೆ ಹುಡುಗಿ ಬೆಳೆದು ನಿಂತಿದ್ದಾಳೆ ಮದುವೆಗೆ. ಬರುವ ತಿಂಗಳ ನಲ್ಲಿಯಾದರೂ ಮುಗಿಸಬೇಡವೇ? ನಾಲ್ಕು ಮಂದೀ ಹತ್ತಿರ ಜಾತಕ ಕೇಳಿನೋಡಪ್ಪಾ! ಹೋದದ್ದನ್ನೆಲ್ಲ ಹೇಳಿ ಹೇಳಿ ಏನು ಪ್ರಯೋಜನ? ಮದುವೆಯನ್ನು ನಿಲ್ಲಿಸಲಿಕ್ಕಾದೀತೆ? ಸಾವಿರ ಸಾವಿರ ಬಾಚಿಕೊಟ್ಟ ಅಳಿಯಂದಿರಿಂದ ಏನು ಸುಖ ಕಂಡೆವು? ಹಣಗಾರ ಹುಡುಗನೇ ರಾಜು ಕೂಡಾ. ಅವನು ಕೂಡ ಉದ್ಯೋಗ ಉದ್ಯೋಗ ಅಂತ ಒದ್ದಾಡುತ್ತಾನೆ. ಆದ್ದರಿಂದ ಇರುವ ಸ್ಥಿತಿಗೆ ತಕ್ಕಹಾಗೆ, ಏನೋ ಕೊಂಚ ಮರ್ಯಾದಸ್ಥ ನಾದ ಬ್ರಹ್ಮಚಾರಿಯನ್ನು ನೋಡು. ಮೂವತ್ತು ನಲವತ್ತು ಸಂಬಳ ವಾದರೂ ಕಾಲುಹೊಟ್ಟೆ ಗಂಜಿಗಾದರೂ ಗತಿಯಿದ್ದರೆ ಸಾಕು. ಮತ್ತೆ ಅವಳ ಅದೃಷ್ಟ" ಎಂದರು ಶೇಷಜ್ಜಿ.

ಈ ಮಾತು ಶಾಸ್ತ್ರಿಗಳನ್ನು ಇನ್ನೂ ಸಿಟ್ಟಿಗೇರಿಸಿತು. ಕಡುದನಿ ಯಿಂದ:—"ನಾನು ಜಾತಕವೂ ಕೇಳುವುದಿಲ್ಲ, ಪಾತಕವೂ ಕೇಳುವುದಿಲ್ಲ.

ನೀನೇನುಬೇಕಾದರೂ ಮಾಡಿಕೊ. ನನ್ನನ್ನು ಮಗುಚಿಹಾಕಿ ಒದ್ದರೆ ಕೂಡ ಒಂದು ಕಾಸೂ ಕಕ್ಕಲಾರೆ. ಏನಿಟ್ಟುಕೊಂಡು ಮದುವೆ ಮಾಡುವುದು? ಬರಿಗೈ ಮೊಳ ಹಾಕೀತಾ? ಆ ಮಹಾ ಪಾಪಿ ರಾಮಭದ್ರದೀಕ್ಷಿತ, ನಮ್ಮ ಸೊತ್ತನ್ನೆ ನಾವು ವ್ಯಾಜ್ಯಮಾಡಿ ಪಡೆಯುವ ಹಾಗೆ ಹಾದಿ ತೋಡಿಬಿಟ್ಟ. ಏನು ಸಾಮರ್ಥ್ಯ! ಇನ್ನು ತೀರ್ಪಾಗಿ ನಮ್ಮ ಭೂಮಿ ನಮಗೆ ಸಿಕ್ಕಲಿಕ್ಕೆ ಎಷ್ಟುಕಾಲವಾಗುತ್ತದೊ? ಕೋರ್ಟು ಖರ್ಚು ಬೇರೆ. ಈ ಲಕ್ಷಣದಲ್ಲಿ ಎಂಥ ಮದುವೆ! ಎಲ್ಲಿಯ ಮಂಗಳ! ನನ್ನಿಂದೊಂದೂ ಆಗದು. ಇನ್ನು ಮೇಲೆ ನನ್ನ ಮುಂದೆ ಮದುವೇ ಮಾತೇ ಎತ್ತಬೇಡ'' ಎಂದರು.

''ಮದುವೇ ಅಂದರೆ ಹೀಗನ್ನುತ್ತೀ. ನಾಳೆ ಅಕಸ್ಮಾತ್ತಾಗಿ ಏನಾದರೂ ಒಂದು ಖರ್ಚು ಬರುತ್ತೇ ಅಂದುಕೊ. ಆಗ ಹೇಗಾದರೂ ಖರ್ಚು ಮಾಡುತ್ತೀಯಷ್ಟೆ? ಹಾಗೆಂದೇ ಇದನ್ನೂ ತಿಳಿ. ಎಲ್ಲಿಯಾದರೂ ಕೈಸಾಲವೋ, ಮನೆಯನ್ನು ಒತ್ತೆಹಾಕಿಯೋ ನಡಸಬೇಕಾದ್ದೇ. ಅದಕ್ಕಾಗಿ ಮಗುವನ್ನು ಎಷ್ಟು ದಿನ ಮದುವೆಯಿಲ್ಲದೆ ಬಾಡಿಸುತ್ತಿ? ಅವಳನ್ನೆ ದೇವರು ನಾಲ್ಕು ಬಗೆಯಿಂದಲೂ ಕೀಳುಮಾಡಿಟ್ಟಿದ್ದಾರೆ. ಹಾಡು—ಓದು ಎಲ್ಲಾ ನಿಲ್ಲಿಸಿಯಾಯಿತು. ನಿಮಗೆಲ್ಲ ಚಾಕರಿ ಮಾಡಲಿಕ್ಕೇ ಅವಳಾಯಿತು!'' ಎಂದರು ಶೇಷಜ್ಜಿ.

''ಓದನ್ನೂ ಹಾಡನ್ನೂ ನಿಲ್ಲಿಸಿದರೇನು? ಮನೆಯಲ್ಲೇ ಅಭಿವೃದ್ಧಿ ಮಾಡಿಕೊಳ್ಳಬಾರದಂತೇನು?''

''ಆಹಾ! ದಿವ್ಯವಾಗಿ! ನಿನ್ನ ಪ್ರೀತಿಯ ಪುತ್ರಿ ಸುಂದರಿ ಸುಖವಾಗಿರಲಿಕ್ಕೆ ಹುಟ್ಟಿದವಳು. ಇಬ್ಬರೂ ನನ್ನ ಮೊಮ್ಮಕ್ಕಳೇ. ನಾನೇ ಹೇಳಬಾರದು. ಇವಳು ವೀಣೆಯನ್ನು ಎತ್ತಿಕೊಂಡರೆ ಸಾಕು, ಅವಳ ಮುಖ ಕುಂಬಳಕಾಯಿಯ ಹಾಗೆ ಆಗುತ್ತದೆ. ಒಂದು ಮುದುಕಿ, ಒಂದು ಮಗು, ಒಂದು ಹುಚ್ಚು ಇವಿಷ್ಟನ್ನೂ ಕಟ್ಟಿಕೊಂಡು ಇವಳೊಬ್ಬಳೇ ಕಷ್ಟಬಡುತ್ತಾಳೆ. ಸುಂದರಿಗೆ ಗಂಡನ ಕೂಡ ಮಾತಾಡಿಕೊಂಡಿರಲಿಕ್ಕೇ ಸರಿಯಾಗಿ ಹೋಗುತ್ತದೆ. ಅದೇನು ಮಾತೋ! ಅವನು ಮಹಡೀ ಮೇಲೆ ಹೋಗುವಾಗ ಇವಳೂ ಹೋಗಿ ಹೊಕ್ಕುಬಿಟ್ಟರೆ, ಅವನು ಹೊರಗೆ ಹೋದ ಮೇಲೆಯೇ ಇವಳು ಇಳಿದು ಬರುತ್ತಾಳೆ. ಅವನು ದೊಡ್ಡಮನುಷ್ಯರ

ಮಗ. ತನ್ನ ಎದುರಿನಲ್ಲಿಯೇ ಡ್ಯಾನ್ಸ್ ಮಾಡುತ್ತಿರಬೇಕಂತ ಅವನೇ ಹೇಳಿದರೂ 'ಅಯ್ಯೋ ಪಾಪ! ನನ್ನ ತಂಗಿ ಸಣ್ಣವಳು; ನಾನೂ ಅವಳ ಜತೆಗಿದ್ದು ಏನಾದರೂ ಮಾಡುತ್ತೀನೆ ಎನ್ನೋದು ಬಿಟ್ಟು, ಅವನು ಕೆಳಗೆ ಹೋಗೆಂದರೆ ಕೂಡ, ಇಳಿಯದೆ ಅಲ್ಲೇ ಇದ್ದುಬಿಡುತ್ತಾಳೆ. ಗಂಡನನ್ನು 'ಗುಮ್ಮ' ಹಿಡಿಯದ ಹಾಗೆ ಕಾಯ್ತಾಳೇನೋ! ಬೆಳಗ್ಗಿನಿಂದ ತಲೆ ಬಾಚಿಕೊಳ್ಳಲಿಕ್ಕೆ ಕೂಡ ಹೊತ್ತಿಲ್ಲ. ಅಕೋ ದೋಸೆಗೆ ಅರೆಯುತ್ತಾಳೆ'' ಎಂದು ನಿಲ್ಲಿಸಿದರು ಶೇಷಜ್ಜಿ.

ಶಾಸ್ತ್ರಿಗಳ ಕೋಪ ಹಾರಿಹೋಯಿತು. "ಇಷ್ಟೇನಾ? ಇನ್ನೂ ಏನಾದರೂ ಇದೆಯ?" ಎಂದರು.

"ನಾನೂ 'ಹೇಳಬಾರದು. ಸುಂದರಿ ಕೂಡಾ ನಮ್ಮ ಮಗುವೇ ಅಲ್ಲವೊ? ಒಂದು ಬೆಣ್ಣೆ ಒಂದು ಸುಣ್ಣವೊ?' ಎಂದು ಸೈಸಿ ಸೈಸಿ ನೋಡಿದೆ. ದಿನೇದಿನೇ ಜಾಸ್ತಿಯಾಗುತ್ತದೆಯೇ ಹೊರತು, ಕೊಂಚವಾದರೂ ನಮ್ಮ ತಂಗಿ ನಮ್ಮ ತಾಯಿ ಎಂತ ಕಾಣುವುದೇ ಇಲ್ಲ. ಸಣ್ಣ ಮಗು ಎಷ್ಟೆ ಕೂಗಲಿ, ಬೆರಳಿಂದ ಕೂಡ ಮುಟ್ಟಿ ನೋಡೋದಿಲ್ಲ. ಎಲ್ಲಾದರೂ ಅವಳು ಗಂಡನೊಂದಿಗೆ ಮಾತಾಡುತ್ತಿದ್ದಾಗ, ನಾನು ಎಡೆಯಲ್ಲಿ ಹೋದರೋ, ಅಷ್ಟರವರೆಗೆ ತಮಿಳಿನಲ್ಲಿ ಮಾತಾಡುತ್ತಿದ್ದವಳು. ದೊಡ್ಡ ದೊರೆಸಾನಿಹಾಗೆ ಇಂಗಿಲೀಷು ದರ್ಬಾರಿಗೆ ಹತ್ತುತ್ತಾಳೆ. ಎಲ್ಲಾ ನಿನ್ನ ಕೊಂಡಾಟ! ನನ್ನ ಕರ್ಮ!"

ಶಾಸ್ತ್ರಿಗಳು ಪೇರುಸಿರುಬಿಟ್ಟು "ಅಬ್ಬಾ!" ಎಂದು ಕುಳಿತುಬಿಟ್ಟರು.

ಲಕ್ಷ್ಮಮ್ಮ ಕನ್ನಡಿಯನ್ನು ನೋಡಿಕೊಂಡು ಕಿಲಕಿಲನೆ ನಗುತ್ತಿದ್ದಳು. ಏನೇನೋ ಅರ್ಥವಿಲ್ಲದ ಹಾಡನ್ನು ಉಚ್ಚಸ್ವರದಲ್ಲಿ ಹಾಡುತ್ತಿದ್ದಳು. ತಾಮ್ರದ ಚೊಂಬಿನಲ್ಲಿ ಕೆತ್ತಿರುವ ಗಿಳಿ ಚಿತ್ರವನ್ನು ನೋಡಿ "ಚಿಲುಕಾ ಚಿಲುಕಾ ರಾವೇ! ನನ್ನು ಚಿಟ್ಲಂಚಿ ಪೋವೇ" ಎಂದು ಕೆಂಜುವಳು. ಚಡಪಡಿಸುತ್ತಿದ್ದ ಕೃಷ್ಣನನ್ನು ಬಾಚಿ ಎತ್ತಿ ತೊಟ್ಟಿಲಲ್ಲಿ ಮಲಗಿಸಲಿಕ್ಕಾಗಿ ಬಾಗಿದರು ಶೇಷಜ್ಜಿ.

ಅದುವರೆಗೆ ಶಾಂತಳಾಗಿದ್ದ ಲಕ್ಷ್ಮಮ್ಮ ಎದ್ದು—"ಎಲೆಲೆ! ತಾಟಕಿ! ಶೂರ್ಪನಖಿ! ನನ್ನ ಕೃಷ್ಣನ್ನ ಯಾಕೆ ಮುಟ್ಟುತ್ತೀಯೇ? ಪೂತನೀ!"

ಎಂದು ಶೇಷಜ್ಜಿಯ ತಲೆಯ ಮೇಲೆ ಪೆಟ್ಟುಬಿಟ್ಟಳು. ಅಜ್ಜಿ ಹೆದರಿ ಹೊರಗೆ ಬಂದರು. ಶಾಸ್ತ್ರಿಗಳು ಮೆಲ್ಲನೆ ಆ ಕೋಣೆಯ ಬಾಗಿಲು ಹಾಕಿ ಅಡಿಗೆ ಮನೆಯ ಕಡೆಗೆ ನಡೆದರು. ಅಲ್ಲಿ ಶ್ಯಾಮಳೆ ತನ್ನ ಕೆಲಸಗಳನ್ನೆಲ್ಲಾ ಮುಗಿಸಿಕೊಂಡು, ಪೂಜೆ ಮಾಡುವಲ್ಲಿ ದೀಪವನ್ನು ಹಚ್ಚಿಟ್ಟು, 'ಶ್ಯಾಮಳಾ ದಂಡಕ'ವನ್ನು ಹೇಳಿಕೊಳ್ಳುತ್ತಿದ್ದಳು.

ಅವಳ ಕೆಲಸಗಳ ಚೊಕ್ಕಟವೂ, ವಿನಯ ವಿಧೇಯತೆಗಳಿಂದ ತುಂಬಿದ ಅವಳ ನೋಟವೂ ಶಾಸ್ತ್ರಿಗಳನ್ನು ಪರವಶಪಡಿಸಿದುವು. ಈ ಗಿಳಿಯನ್ನು ಪರಿಸಿಕೊಳ್ಳಲು ಯಾರು ಪುಣ್ಯ ಮಾಡಿದ್ದಾರೋ ಎಂದು ಬೇಸರಿಸಿಕೊಂಡರು. "ಶ್ಯಾಮಳಾ! ಏನಡಿಗೆ ಮಾಡಿದ್ದಿ?" ಎಂದು ಕೇಳಿ ಹೊಸ್ತಿಲ ಮೇಲೆ ನಿಂತಂತೆಯೇ "ಅಮ್ಮ ಅಜ್ಜೀನ ಕಟಕ್ಕನೆ ಪೆಟ್ಟಬಿಟ್ಟಳು. ನನ್ನ ನೋಡಿದರೆ ಏನು ಹೇಳಿಯಾಳೋ? ನೀನು ಕೊಂಚ ಬರುತ್ತೀಯಾ? ಸರಿ, ಸ್ವಲ್ಪ ತಾಳಿಯೇ ಬಾ" ಎಂದರು.

ಲಕ್ಷ್ಮಮ್ಮ ಅವಕ್ಕೆ ಮೊದಲು ಇದ್ದುದಕ್ಕಿಂತಲೂ ತಿಳಿಯಾಗಿದ್ದಾಳೆಂದೇ ತೋರಿತು. ಡಾಕ್ಟರೂ ಹಾಗೆಯೇ ಅಭಿಪ್ರಾಯಪಟ್ಟರು. ಮಗುವನ್ನು ಯಾರಾದರೂ ಎತ್ತಿಕೊಂಡರೆ ಮಾತ್ರ ಕೆಲವು ಬಾರಿ ಕೋಪ ಬರುವುದೇ ಹೊರತು, ಉಳಿದ ವೇಳೆಗಳಲ್ಲಿ ಶಾಂತವಾಗಿಯೇ ಇದ್ದಳು. ಕಲ್ಯಾಣಿ ನಾಗು ಎಂಬ ಹೆಸರು ಹೇಳುತ್ತಾ ಸುಂದರಿ–ಶ್ಯಾಮಳೆಯರನ್ನು ಕರೆಯುತ್ತಿದ್ದಳು. ಅವಳು ಏನು ಹೇಳಿದರೂ "ಹೌದು ಹೌದು" ಎಂದು ಹೇಳುವಂತೆ ವೈದ್ಯರು ಹೇಳಿದ್ದರು. ದಿನ ದಿನಕ್ಕೆ ಅವಳು ಗುಣವಾಗುತ್ತಾ ಬರುವುದನ್ನು ಕಂಡು ಶಾಸ್ತ್ರಿಗಳಿಗೂ ಸಮಾಧಾನವಾಗಲಾರಂಭಿಸಿತ್ತು. ಆದರೂ ನಾಗು ತಿರುಗಿ ಬಂದರೆ ಪೂರಾ ಗುಣವಾದಾಳೆಂದೂ ತೋರುತ್ತಿತ್ತು.

ಸಿನಿಮಾ ನೋಡಿಕೊಂಡು ಬಂದ ಸುಂದರಿ, ತಲೆ ನೋಯುತ್ತದೆಂದು ಹೇಳಿ ಮಲಗಿಬಿಟ್ಟಳು. ಸರಳಸ್ವಭಾವದವಳಾದ ಶ್ಯಾಮಳೆ ಕೆಲಸಗಳನ್ನೆಲ್ಲ ಮುಗಿಸಿಕೊಂಡು, ಲಕ್ಷ್ಮಮ್ಮನ ಬಳಿಗೆ ಹೋಗಿ, ಕೃಷ್ಣನನ್ನೆತ್ತಿಕೊಂಡು ಲಾಲಿ ಮಾಡುತ್ತಿದ್ದಳು. ಕೃಷ್ಣ ತನ್ನ ಎಳೆಯ ಕೈಗಳನ್ನು ನೀಡಿಕೊಂಡು "ವಾವಾ ವಾವಾ" ಎಂಬಾಗ ಅವನ ಬಾಯಿಯಿಂದಿಳಿದ ಜೊಲ್ಲು

ಅವಳ ಮುಖದಲ್ಲೆಲ್ಲ ಅಂಟಿಕೊಂಡಿತು. ಅದರಿಂದ ಶ್ಯಾಮಳೆಗೆ ಆನಂದದ ಕಡಲಲ್ಲಿ ಲೋಲಾಡುವಂತಾಯಿತು.

ಅವಳು ಕಷ್ಟಚಿಂತೆಗಳನ್ನೆಲ್ಲ ಮರೆಯಲಿಕ್ಕಾಗಿ, ಕೃಷ್ಣನನ್ನೂ ಪುಸ್ತಕಗಳನ್ನೂ ಸಾಧನವನ್ನಾಗಿಟ್ಟುಕೊಂಡಿದ್ದಳು. “ರಂಗನಿರುತ್ತಿದ್ದರೆ ಎಷ್ಟೋ ಪುಸ್ತಕಗಳನ್ನು ತಂದು ತಂದು ಕೊಡುತ್ತಿದ್ದ. ಅವನೂ ಹೋಗಿಬಿಟ್ಟ. ಇನ್ನು ನೀನೊಬ್ಬನೇ ನನಗೆ” ಎಂದು ಪ್ರೀತಿಯಿಂದ ಮಗುವನ್ನು ಮುದ್ದಾಡುತ್ತಿದ್ದಳು. ಅವನು ಕಣ್ಣುಗಳನ್ನು ಅರಳಿಸುವಾಗಲೂ ಗಲ್ಲಗಳು ಗುಳಿ ಬೀಳುವಂತೆ ಅವನು ಹಲ್ಲಿಲ್ಲದ ಬಾಯಿ ತೆರೆದು ನಕ್ಕಾಗಲೂ ಅವಳು ಆನಂದಪರವಶಳಾಗಿಬಿಡುತ್ತಿದ್ದಳು. ಈ ಪ್ರಪಂಚದಲ್ಲಿ ಅವಳಿಗೆ ಅವನಷ್ಟು ಪ್ರೀತಿಯ ವಸ್ತು ಬೇರಾವುದೂ ಇರಲಿಲ್ಲ. ಒಬ್ಬಳೇ ಕೆಲಸ ಮಾಡುವಾಗ ಕೂಡ, “ಕೃಷ್ಣ ನನ್ನಪ್ಪ, ನನ್ನ ಕಬ್ಬಿನ ತುಂಡು, ಬಂಗಾರ, ನನ್ನ ಕಣ್ಣು, ಕಣ್ಮಣಿ” ಎಂದು ತನಗೆ ತಾನೇ ಹೇಳಿಕೊಳ್ಳುವಳು.

ಅವಳು ಕೃಷ್ಣನನ್ನೆತ್ತಿಕೊಂಡು, ತಾಯಿಯ ಬಳಿಯಲ್ಲಿ ಹಾಡುತ್ತಿದ್ದಳು. ಆ ಹಾಡಿನ ಭಾವಾರ್ಥದಿಂದ ಅವಳ ಕಣ್ಣಿನಲ್ಲಿ ನೀರು ಸುರಿಯುತ್ತಿತ್ತು. ಬಾಲ್ಯದಲ್ಲಿ ಪನಂಗುಡಿಯಲ್ಲಿ ಮನೆ ಕಟ್ಟಿ ಆಡಿದ್ದೂ, ತನ್ನ ಗೆಳತಿಯರೊಂದಿಗೆ ಬೊಂಬೆ ಮದುವೆಯಾಟ ಆಡಿದ್ದೂ ಅವಳ ನೆನಪಿಗೆ ಬಂತು. ಹಾಗೆಯೇ ಮದರಾಸಿಗೆ ಬಂದಮೇಲೆ ತಮ್ಮ ಕುಟುಂಬಕ್ಕೆ ಬಂದ ಕಷ್ಟಪರಂಪರೆಗಳನ್ನೂ ನೆನೆದಳು. “ನಾಗು ಯಾವಾಗ ಬರುವನೊ? ರಂಗ ಯಾವಾಗ ಬರುವನೋ?” ಎಂಬ ಮಾತುಗಳು ಅವಳ ಬಾಯಿಯಿಂದ ಜಾರಿಕೊಂಡುವು.

“ನಾಗು” ಎಂಬ ನುಡಿ ಕಿವಿಗೆ ಬೀಳುತ್ತಲೇ ಲಕ್ಷ್ಮಮ್ಮ ಎದ್ದು ಕುಳಿತು, “ಕಲ್ಯಾಣಿ! ನಾಗು ಬಂದು ಬಿಟ್ಟನೊ?” ಎಂದು ಅರ್ಥವಿಲ್ಲದ ನೋಟದಿಂದ ಅವಳನ್ನು ಪಿಳಿಪಿಳಿ ನೋಡಿದಳು.

ಶ್ಯಾಮಳೆ ಗಾಬರಿಯಾದಳು.

# ಕನಸು

ಸುಂದರವಾದ ತೋಪು. ಅದರ ನಡುವೆ ತಾವರೆಯ ಕೊಳ. ಕಾಂಬವರ ಕಂಗಳಿಗೆ ಸೊಗಯಿಸುವ ಹೂಗಿಡಗಳು. ಅದಕ್ಕೆ ಪಕ್ಕದಲ್ಲಿ ಒಂದು ಸಣ್ಣ ಕುಟೀರ. ಸುತ್ತು ಮುತ್ತೂ ಮಾವು, ಪೇರ, ಗೇರು ಮೊದಲಾದ ಹಣ್ಣಿನ ಮರಗಳು. ಅವುಗಳಲ್ಲಿ ಗುಂಪುಗುಂಪಾಗಿ ಕುಳಿತೂ ಆಡಿಯೂ ಹಾಡಿಯೂ ಹಕ್ಕಿಗಳು ಮೆರೆಯುತ್ತಿದ್ದುವು. ಸಮೀಪದಲ್ಲಿರುವ ಗುಡ್ಡಗಳ ಇಳಿಜಾರಿನಲ್ಲಿ ಓಡಿಬಂದು ಧುಮುಕಿ ಸ್ಫಟಿಕದಂತೆ ಹರಿಯುವ ಒಂದು ತೊರೆ. ಅದರ ಚಲಚಲ ಶಬ್ದ. ಇವುಗಳ ನಡುವೆ ಮಾವಿನ ಮರದ ಇಳಿಗೊಂಬೆಯೊಂದರಲ್ಲಿ ಕಾಲಿಳಿಬಿಟ್ಟು ಕುಳಿತುಕೊಂಡು ಶ್ಯಾಮಳೆ ಉಯ್ಯಾಲೆಯಾಡುತ್ತಿದ್ದಳು.

ಅವಳ ಗಲ್ಲಗಳನ್ನು ಮುದ್ದಿಸುತ್ತ ಕಿವಿಗಳಲ್ಲಿರುವ ಲೋಲಾಕುಗಳ ನಕ್ಷತ್ರಗಳು ಥಳಥಳಿಸಿದುವು. ಚಿತ್ರ ಕೆಲಸಗಳಿಂದ ರಂಜಿಸುವ ತೆಳುವಾದ ಬಿಳಿಯ ರೋಜಾಬಣ್ಣದ ಸೀರೆಯನ್ನುಟ್ಟುಕೊಂಡು, ಎಡದ ತೋಳಿನ ಬದಿಯಲ್ಲಿ ನವಿಲಿನ ಚಿತ್ರದ 'ಬ್ರೋಚ್' ಹಾಕಿಕೊಂಡಿದ್ದಳು. ಕೊರಳಿನಲ್ಲಿ ಮುತ್ತಿನಹಾರ. ಪಾದಗಳಲ್ಲಿ ಮೆಟ್ಟು ಹಾಕಿದಹಾಗೆ 'ಮರುದಾಣಿ' ತೀಡಿಕೊಂಡಿದ್ದಳು.

ಇದಿರಿನಲ್ಲಿರುವ ಗುಡಿಸಲಿನೊಳಗಿನಿಂದ ಒಬ್ಬಳು ಹೆಂಗುಸು, ಕೊಂಚ ಸ್ಥೂಲ ಶರೀರದವಳು, ಕೈಯಲ್ಲಿ ರಾಮೇಶ್ವರದಲ್ಲಿ ಮಾಡಲ್ಪಡುವ, ತಾಳೆ ಯೋಲೆಯ ಅರಸಿನ ಬಣ್ಣದ ಪೆಟ್ಟಿಗೆಯೊಂದನ್ನು ತೆಗೆದುಕೊಂಡು ಬಂದಳು. ಅವಳನ್ನು ಕಂಡ ಶ್ಯಾಮಳೆ ಮರದಿಂದ ಕೆಳಗಿಳಿದಳು. ಆ ಹೆಂಗುಸೂ ಅವಳ ಬಳಿಗೆ ಬಂದು—"ಅಮ್ಮ! ನಿನಗೇನೂ ಕೊರತೆಯಿಲ್ಲ. 'ಇದನ್ನು ಭದ್ರವಾಗಿಟ್ಟುಕೊ. ಮಳೆಯಂತೆ ಬಂದದ್ದು ಹನಿಯಂತೆ ಹಾರುತ್ತದೆ' ಎಂದಂದು ಆ ಓಲೆಯ ಪೆಟ್ಟಿಗೆಯನ್ನು ಅವಳ ಕೈಗಿತ್ತಳು. ಅದನ್ನು ತೆರೆದು ನೋಡಿದಳು ಶ್ಯಾಮಳೆ. ಅದರಲ್ಲಿ ಅರಸಿನದ ಕೋಡುಗಳೂ, ಕುಂಕುಮ ಕರಂಡಕವೂ, ಕನ್ನಡಿ, ಕರಿಮಣಿ, ಅಡಕೆ ವೀಳ್ಯ ಇವುಗಳೂ ಕಂಡು ಬಂದುವು. ಮತ್ತೆ ನೋಡಿದಾಗ ಆ ಹೆಂಗುಸು ಕಾಣಲಿಲ್ಲ. ಕಾಲುಂಗುರದ

ಧ್ವನಿ ಮಾತ್ರ, "ಘಲ್ಲು, ಘಲ್ಲು" ಎಂದು ಕೇಳಿಸಿಕೊಂಡು ಹೋಯಿತು. ಕೃಷ್ಣನ ಧ್ವನಿಯನ್ನು ಕೇಳಿ, ಎದ್ದು ಕುಳಿತು ಶ್ಯಾಮಳೆ ಕಣ್ಣುಜ್ಜಿಕೊಳ್ಳು ತ್ತಿದ್ದಳು.

* * *

"ಏನಮ್ಮ ಶ್ಯಾಮಳಾ! ಅವಳು ಎಂಥಾ ಸೀರೆ ಉಟ್ಟಿದ್ದಳು?"

"ಕೆಂಪು. 'ಕಾಯೂ ಹಣ್ಣೂ' ಅನ್ನುತ್ತೀಯಲ್ಲ? ಅಂಥದೇ ಸೀರೆ. ಹಣೆಯಲ್ಲಿ ದೊಡ್ಡ ಕುಂಕುಮ ಬೊಟ್ಟು, ಕಾಲಿನಲ್ಲಿ ಬಂಡಿಯುಂಗುರ. ಕಿವಿಗಳಲ್ಲಿ ಹೊನ್ನೋಲೆ. ಮೂಗಿನಲ್ಲಿ ದೊಡ್ಡ ಮೂಗುತಿ. ಸ್ವಲ್ಪ ಹೆಚ್ಚು ಕಡಮೆ ಪಾಂಡಮಂಗಲದ ಅಜ್ಜಿ ಹಾಗೇ ಇದ್ದಳು" ಎಂದಳು ಶ್ಯಾಮಳೆ.

"ಸರಿ, ಸಂದೇಹವಿಲ್ಲ. ಸುಮಂಗಲಿ ಹೆಂಗುಸೇ ಸರಿ. ಬೆಳಗ್ಗೆ ಸ್ನಾನಮಾಡಿದ ಕೂಡಲೇ ಮುಗಿಸಿಬಿಡಬೇಕು. ಅಮ್ಮಾ! ದೇವತೇ! ನೀವೆಲ್ಲಾ ಸೇರಿ ನನ್ನ ಮಗುವಿಗೆ ಒಳ್ಳೆಯ ವರನನ್ನು ಹುಡುಕಿತನ್ನಿ, ಸ್ವಾಮಿ ತಿರುಪತಿ ವೇಂಕಟೇಶ್ವರಾ! ನನ್ನ ಮಕ್ಕಳನ್ನು ಕಾಪಾಡು. ನಿನಗೆ ಕೈತುಂಬಾ ದುಡ್ಡೂ, ಅಂಗ ಪ್ರದಕ್ಷಿಣೆಯನ್ನೂ ಮಾಡಲಿಕ್ಕೆ ಹೇಳು ತ್ತೇನೆ." ಎಂದು ಶೇಷಜ್ಜಿ ಬಗೆ ಬಗೆಯಾಗಿ ಬೇಡಿಕೊಂಡು, "ರಂಗನಾಥನ । ಪಂಕಜಪಾದವ । ಅಂಗಕರಗಿ—" ಎಂದು ಉದಯರಾಗವನ್ನು ಹೇಳ ತೊಡಗಿದರು. ಅಜ್ಜಿಯೂ ಮೊಮ್ಮಗಳೂ ನಿದ್ದೆಮಾಡದೆಯೇ ಉಳಿದಿದ್ದ ಕೊಂಚ ರಾತ್ರಿಯನ್ನು ಕಳೆದರು.

ಬೆಳಗ್ಗೆ ಸುಮಾರು ಒಂಭತ್ತುಗಂಟೆ. ಸುಂದರಿ ತರಕಾರಿ ಹಚ್ಚಿಕೊಂಡಿ ದ್ದಳು. ಅಜ್ಜಿ ಮಣೆಯಿಟ್ಟುಕೊಂಡು ಒಲೆಯ ಮುಂದೆ ಕುಳಿತು, ಏನೋ ಮಾಡಿಕೊಂಡಿದ್ದರು. ಅವರ ಅಂಗವು ಮಾತ್ರ ಹಾಗಿತ್ತೇ ಹೊರತು, ಅಂತರಂಗವು ಶ್ಯಾಮಳೆಯ ಕನಸನ್ನೇ ಕುರಿತು ಯೋಚಿಸುತ್ತಿತ್ತು. ಮಗು ಕೃಷ್ಣನು 'ಎಳೆದು ಉರುಳಿಸಿ' ತಂಟೆ ಮಾಡಿಕೊಂಡಿದ್ದ.

ಶ್ಯಾಮಳೆ ಮಿಂದು ಮಡಿಯುಟ್ಟು, ಅಜ್ಜಿಗೆ ಪರಿಚಾರಿಕೆಮಾಡಲು ಸಿದ್ಧಳಾಗಿ ಬಂದಳು. "ಸಾರ್. ಪೋಸ್ಟ್" ಎಂಬ ಶಬ್ದವನ್ನು ಕೇಳಿ, ಜಪಮಾಡುತ್ತಿದ್ದ ಶಾಸ್ತ್ರಿಗಳು ಅಂಗವಸ್ತ್ರದಿಂದ ಕೈಮುಚ್ಚಿಕೊಂಡೇ ಎದ್ದು ಹೊರಗೆ ಹೋದರು. ಕಾಗದವನ್ನು ಕಾಣುತ್ತಲೇ ಅವರ ಮುಖವು

ಅರಳಿತು. "ಅಮ್ಮಾ! ಅಮ್ಮಾ! ರಂಗ ಕಾಗದ ಬರೆದಿದ್ದಾನೆ. ಏನೋ ಕೆಲಸದ ನಿಮಿತ್ತವಾಗಿ ಮಧುರೆಗೆ ಹೋದನಂತೆ. ಮೂವತ್ತು ರೂಪಾಯಿ ಸಂಬಳಕ್ಕೆ ಏನೋ ಒಂದು ಕೆಲಸ ಸಿಕ್ಕುವ ಹಾಗಿದೆಯಂತೆ. ಉಳಿದ ವಿಷಯಗಳನ್ನು ಹಿಂದಿನಿಂದ ತಿಳಿಸುವೆನೆಂತ ಬರೆದಿದ್ದಾನೆ. ವಿಳಾಸವೇ ಕಾಣುವುದಿಲ್ಲ. ದೇವಾರ ಎಂದು ಮಾತ್ರ ಇದೆ. ದೇವಾರ ಅಂತ ಒಂದು ಊರುಂಟೊ? ಅದೆಲ್ಲಿದೆಯೊ?" ಎಂದರು.

"ಏನೋ! ಹೆಸರೇ ಹೊಸತಾಗಿದೆ. ದೇವಾರವೋ ತಿರುವಾಚಕವೋ! ಎಲ್ಲಿಯಾದರೂ ಸೌಖ್ಯವಾಗಿದ್ದರೆ ಸರಿ. ಹ್ಯಾಗಾದರೂ ಒಳ್ಳೇ ರೀತಿಯಲ್ಲಿ ಬೆಳಗಾದರೆ ಸಾಕಾಗಿದೆ. ಶ್ಯಾಮುಳಿ ಬೆಳಗಿನಜಾವದಲ್ಲಿ ಒಂದು ಸ್ವೊಪ್ಪನ ಕಂಡಳಂತೆ. ಒಳ್ಳೇ ಸ್ವೊಪ್ಪನ. ಬೇಗದಲ್ಲಿಯೇ ಶುಭವಾದೀತು. ಅದಕ್ಕೆ ತಕ್ಕ ಹಾಗೆಯೇ ರಂಗನ ಕಾಗದ ಬಂತು. ಇನ್ನುಮೇಲೆಯಾದರೂ ಒಳ್ಳೇ ಕಾಲವು ಬರಬಾರದೆ? ಇಷ್ಟೊಂದು ಪುಣ್ಯ ಯಾರಾದರೂ ಮಾಡಿರಬಾರದೆ? ಮೂವತ್ತು ರೂಪಾಯಿ ಕೆಲಸವಾದರೂ ಸಿಕ್ಕಿತಲ್ಲ" ಎಂದು ಶೇಷಜ್ಜಿ ಸಂತೋಷದಿಂದ ಹೇಳಿದರು.

ಅದುವರೆಗೆ ಕೋಣೆಯನ್ನು ಬಿಟ್ಟು ಹೊರಗೆಬಾರದ ಲಕ್ಷ್ಮಮ್ಮ— "ಏನು? ಏನೇ ಅದೂ ಕಲ್ಯಾಣೀ, ಏನು ಸಮಾಚಾರ?" ಎಂದು ಕೇಳುತ್ತಾ ಅಡುಗೆ ಮನೆಯೊಳಗೆ ಬಂದುಬಿಟ್ಟಳು.

ಶಾಸ್ತ್ರಿಗಳಿಗೆ ಸಂತೋಷವು ಉಕ್ಕಿಬಿಟ್ಟಿತು. ಸುಂದರಿ ರಂಗನನ್ನು ಕುರಿತು ರಾಜೂಗೆ ತಿಳಿಸಲಿಕ್ಕಾಗಿ ಮಹಡಿಯ ಮೇಲೆ ಓಡಿದಳು. ಶಾಸ್ತ್ರಿಗಳು ಮಾತಾಡಿಕೊಂಡಿರುವಾಗಲೇ,

ಹೊರಗಿನಿಂದ 'ತತ್ವಗೀತಧ್ವನಿ' ಕೇಳಿಬಂತು. "ಸ್ವಾಮಿಗಳು ಬಂದುಬಿಟ್ಟರು" ಎಂದಂದು ಶಾಸ್ತ್ರಿಗಳು ಬೀದಿಯ ಬದಿಗೆ ಹೋದರು. "ಜಾತಿಭೇದವೇತಕೋ ಜಲದೋಟದ ಭೂಮಿಯಲಿ" ಎಂದು ಆರಂಭಿಸಿದ್ದನ್ನು ಒಡನೇ ನಿಲ್ಲಿಸಿ ಸ್ವಾಮಿಗಳೆಂದರು: "ಮುಖದಲ್ಲಿ ಮುದವೇನು? ಮನದಲ್ಲಿ ಹರುಷವೇನು?"

ಶಾಸ್ತ್ರಿಗಳು ರಂಗನ ಕಾಗದವನ್ನು ಅವರ ಕಡೆಗೆ ನೀಡಿದರು. ಸ್ವಾಮಿಗಳು ನೋಡಿ, "ಕಲ್ಪಕವೇ ಹೇಳಿರುವಳಲ್ಲಾ? ಮಗನೇ ದುಃಖಿಸಬೇಡ!

ಎಲ್ಲಾ ಮಾಯೆ! ಎಂದಿರುವಳಲ್ಲಾ! ಅವಳು ಹುಸಿಯುಸಿರುವಳೆ? ಆನಂದ ಕಲ್ಪಕವೇ!" ಎಂದು ದಂಡವನ್ನು ಕೆಳಗಿಟ್ಟು ಸ್ವಾಮಿಗಳು ಕುಳಿತುಬಿಟ್ಟರು.

ಶ್ಯಾಮಳೆ ಕೆಲಸವಿರುವುದೆಂದು ಹೇಳಿ ಕೃಷ್ಣನನ್ನು ತಂದು ಅಲ್ಲಿಟ್ಟು ಹೊರಟುಹೋದಳು. ಅವನು "ತಾತ್ತಾ ಕಾಕ್ಕಾ—" ಎನ್ನುತ್ತ ಶಾಸ್ತ್ರಿಗಳ ಜುಟ್ಟನ್ನು ಹಿಡಿದೆಳೆದನು. ಶಾಸ್ತ್ರಿಗಳು ಸಂತೋಷವನ್ನು ಅಡಗಿಸಿಕೊಳ್ಳಲಾರದೆ,—"ಸ್ವಾಮಿಗಳು ಹೇಳಿದ್ದು ಸುಳ್ಳಾಗದು. ಶ್ಯಾಮಳೆ ಕನಸು ಕಂಡಳಂತೆ" ಎಂದು ಕನಸಿನ ವಿವರವನ್ನು ಹೇಳಿದರು.

ಕಡೆಯವರೆಗೆ ಮೌನವಾಗಿ ಕೇಳುತ್ತಿದ್ದ ಸ್ವಾಮಿಗಳು—"ಅಪ್ಪಾ, ಅದು ಯಾರು ಗೊತ್ತೆ? ನಿನ್ನ ಮಗಳು ಒಳ್ಳೆಯ ಭಾಗ್ಯವತಿ. ಹೆಸರು ಹದಿನಾರೂ ಹೆತ್ತು, ಹಿರಿಬಾಳುವೆ ಬಾಳುತ್ತಾಳೆ. ಆ ಮೂಗುತಿ ಬುಲ್ಲಾಕಿನವಳು ಯಾರೆಂದು ಈ ಮಗು ಕೃಷ್ಣ ಕೂಡ ಹೇಳಿಯಾನು. ಅವಳು ನಮ್ಮೆಲ್ಲರ ತಾಯಿ. ಮಹಾತಾಯಿ. ಆದಿಪರಾಶಕ್ತಿ."

"ಹಾಗಾದರೆ ಅದು ಶುಭಸೂಚನೆ ಎನ್ನುವಿರಾ? ತಾಯಿ, ಸುಮಂಗಲೀ ಪೂಜೆ ಮಾಡಿಸಬೇಕೆಂದು ಹೇಳುತ್ತಾಳೆ" ಎಂದರು ಶಾಸ್ತ್ರಿಗಳು.

"ಮಾಡು ಮಾಡು. ನಿನಗೆ ಹೇಗೆ ಹೇಗೆ ತೋರುತ್ತದೋ ಹಾಗೆಲ್ಲಾ ಮಾಡು. ಈ ದೇಹ ಗೋದಾವರೀ ಪುಷ್ಕರಕ್ಕೆ ಹೋಗಿ ಅಲ್ಲಿಂದ ಪೂರೀ-ಜಗನ್ನಾಥಕ್ಕೆ ಹೋಗುತ್ತದೆ. ತಿರುಗಿ ಬರುವಾಗ ಸುಖವಾಗಿರುತ್ತೀ. ಅಪ್ಪಾ! ದುಃಖಿಸಬೇಡ. ಒಂದೆಂದಿರು; ದೈವವುಂಟೆಂದಿರು. ಸತ್ಯವೆಂದರಿ; ಭಯ ಬೇಡ. ಜಯವುಂಟು, ಭಯವಿಲ್ಲ—ಓ ಮನಸ್ಸೇ! ಆನಂದ ಕಲ್ಪಕವೆ! ...." ಎಂದು ಹಾಡುತ್ತಾ ಸ್ವಾಮಿಗಳು ಜಗಲಿಯಿಂದ ಕೆಳಕ್ಕಿಳಿದರು.

ಅಂದು ಲಕ್ಷ್ಮಮ್ಮ ಎಂದಿಲ್ಲದ ಉತ್ಸಾಹದಿಂದ ಕಾಣಿಸಿದಳು. ಡಾಕ್ಟರು ಕೂಡ ಇನ್ನೆರಡು ತಿಂಗಳಲ್ಲಿ ಮೊದಲಿನಂತೆ ಆಗಿಬಿಡಬಹುದೆಂದೂ, ಆದರೆ ಅಧಿಕ ಕೋಪವೋ ದುಃಖವೋ ಸಂತೋಷವೋ ಆಗಿಬಿಡದ ಹಾಗೆ ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದೂ, ಎಲ್ಲಿಯಾದರೂ ನಾಗು ಬಂದರೂ ಫಕ್ಕನೆ ಅವಳಿದಿರಿಗೆ ಬರದಂತೆ ನೋಡಿಕೊಳ್ಳಬೇಕೆಂದೂ ಹೇಳಿದರು.

ಅಂದು ದಿನಚರಿ ಪತ್ರಿಕೆಯಲ್ಲಿ ನಾಗುವೂ, ಅವನ ಸಹಚಾರಿಗಳಾದ ಸ್ವಯಂಸೇವಕರೂ ಮದರಾಸಿನ ಸೆಂಟ್ರಲ್ ಜೈಲಿಗೆ ಕಳುಹಿಸಲ್ಪಟ್ಟು, ಬೇಗದಲ್ಲಿಯೇ ಬಿಡುಗಡೆ ಹೊಂದುವರೆಂಬ ಸಮಾಚಾರ ಬಂದಿತ್ತು.

ಶೇಷಜ್ಜಿ ಗುಟ್ಟಾಗಿ ಶಾಸ್ತ್ರಿಗಳನ್ನು ಕರೆದು,—“ಏನೋ ಅಪ್ಪಾ, ಮೊದಲೆಲ್ಲಾ ಜೈಲಿಗೆ ಹೋಗಿಬಂದವರಿಗೆ ಜುಟ್ಟುಟ್ಟು ಜನಿವಾರ ಹಾಕುವ ಪದ್ಧತಿಯುಂಟು. ಇವನಿಗೂ ಅದೆಲ್ಲಾ ಮಾಡಬೇಕೋ ಬೇಡವೋ?” ಎಂದು ಭಯಗೊಂಡು ಕೇಳಿದರು.

“ಈಗ ನಿನಗೇಕೆ ವಿಚಾರ? ಯಾರೂ ಹುಡುಗಿ ಕೊಡಲಿಕ್ಕಿಲ್ಲ ಅಂತ ಭಯವೊ? ಮೊದಲು ಸಂಪಾದಿಸಿ ಉಣ್ಣಲು ಕೈಯಿಂದಾಗಲಿ. ಮತ್ತೆ ಆ ಯೋಚನೆ ಎಲ್ಲಾ ಮಾಡುವ. ಹ್ಯಾಗಾದರೂ ಈ ಹುಡುಗಿಯನ್ನು ಯಾರ ಕೈಯಲ್ಲಾದರೂ ಕೊಟ್ಟರೆ ಸಾಕಾಗಿದೆ. ಇಂಥಾ ಹುಡುಗರಿಗೆಲ್ಲ ಮದುವೆಯಾದರೂ ಒಂದೇ, ಕಲ್ಲು ಗಣಪತಿಯ ಹಾಗೆ ಬಿಟ್ಟರೂ ಒಂದೆ” ಎಂದರು.

“ಏನೋ ಕೇಳಿದೆ. ಹ್ಯಾಗಾದರೂ ಹುಡುಗ ಕ್ಷೇಮವಾಗಿ ಬಂದರೆ ಸಾಕು. ಕೋಡಿಮನೆ ಕುಪ್ಪಣ್ಣಿಯ ಮಗ ಲಕ್ಷ್ಮಣ ಇಂಜಿನಿಯರ್ ಪರೀಕ್ಷೆಗೆ ಕಾಶಿಗೆ ಹೋಗಿದ್ದಾನಂತೆ. ಜಾತಕ ಕೇಳಬಹುದೊ?” ಎಂದು ಕೇಳಿದರು.

“ಅಬ್ಬಬ್ಬ! ಬಲವಾದ ಕೈಗಳದು. ನಾವು ಮೊದಲಿನಂತೆ ಇದ್ದೇವೆಂತ ನೆನೆದು ಮಾತಾಡುತ್ತೀ. ನಾಲ್ಕು ಸಾವಿರ ರೊಕ್ಕವೂ ನಾಲ್ಕು ಸಾವಿರ ಉಡುಗೊರೆ ಉಪಚಾರಗಳೂ ಬೇಕಂದಾರು. ಈಗ ಸಾವಿರ ರೂಪಾಯಿ ಸಿಕ್ಕುವುದೇ ದೊಡ್ಡದಾಗಿದೆ. ಕಲ್ಯಾಣಿಗೂ ಸುಂದರಿಗೂ ಏನೋ ಇತ್ತು ಮಾಡಿದೆವು. ಶ್ಯಾಮಳೆಗೆ ಮಾತ್ರ ಅಷ್ಟು ಅದೃಷ್ಟವಿಲ್ಲ. ಏನು ಮಾಡುವುದು? ಯಾರಾದರೊಬ್ಬ ಬಡ ಹುಡುಗನನ್ನು ನೋಡಿ ಒಂದೇ ದಿನದ ಮದುವೆಯಾಗಿ ಮಾಡಬೇಕಾಗಿದೆ” ಎಂದರು ಪತಂಜಲಿ ಶಾಸ್ತ್ರಿಗಳು.

“ಅರೆ ದಡ್ಡ! ಅದು ನನಗೆ ಗೊತ್ತಿಲ್ಲವೊ? ಈಗ ಅವರು ಅಷ್ಟೆಲ್ಲಾ ಕೇಳೋದಿಲ್ಲಂತೆ. ಈ ಪಂಚಕಾಲದಲ್ಲಿ ಯಾರುತಾನೇ ಹೆಚ್ಚು ಕೊಟ್ಟಾರು?

'ಒಂದು ಸಾವಿರ ಮಾತ್ರ ಕೊಟ್ಟು ಉಪಾಯದಲ್ಲಿ ಮದುವೆಯಾದರೆ ಸಾಕು' ಅಂತ ಕುಪ್ಪಣ್ಣಿಯ ತಂಗಿ ಬಾಗಿ ಹೇಳಿದಳು."

"ಅಮ್ಮಾ! ನೀನು ಬರೀ ಸಾಧು. ಬಾಗಿ ಬಲು ಜೋರಿನವಳು. ನಾವಿಷ್ಟು ಬಡವಾಗಿದ್ದೇವೆಂದು ತಿಳಿದುಕೊಂಡು, ಬೇಕಂತ ನಮ್ಮನ್ನು ಪರಿಹಾಸವಾಗಿ ಕೇಳುತ್ತಾಳೆ. ಅದು ಸತ್ಯಾಂತ ನಂಬುತ್ತೀಯಲ್ಲಾ? ಇನ್ನೊಮ್ಮೆ ಕೇಳಿದರೆ ವರ ನಿಶ್ಚಯ ಆಯಿತೂ ಅಂತ ಅಂದುಬಿಡು" ಎಂದರು.

# ಕಣ್ಣೊಳಗೆ ಹೊಕ್ಕ ಕಳ್ಳ

ರಾತ್ರಿ ಎಂಟು ಗಂಟೆ. ಜಗದೀಶನು ಊಟವನ್ನು ಮುಗಿಸಿ ಹಗ್ಗದ ಮಂಚದಲ್ಲಿ ಕುಳಿತು ಏನೋ ಆಲೋಚನೆ ಮಾಡುತಿದ್ದನು. ರಂಗನು ಹಗಲೆಲ್ಲಾ ಸುತ್ತಾಡಿದ ಆಯಾಸದಿಂದ, ಹಾಸಿಗೆ ಮೂಸಿದ್ದೇ ತಡ, ಒಡನೇ ನಿದ್ದೆ ಹತ್ತಿಬಿಟ್ಟಿತ್ತು. ಶೆಲ್ಲಮ್ಮ ಏನೋ ಪಾತ್ರೆಗಳನ್ನೂ ಪೆಟ್ಟಿಗೆ ಗಳನ್ನೂ ಎಳೆಯುತ್ತಾ ಇಡುತ್ತಾ ಇದ್ದಳು. ಅವಳಿಗೆ ಮನೆಯನ್ನು ಖಾಲಿ ಮಾಡಬೇಕೆಂಬ ಯೋಚನೆ ಬಂದಾಗ, ತಾನು ಆ ಊರಿಗೆ ಬಂದಾಗ ಇದ್ದ ಸ್ಥಿತಿಯೂ, ಆ ಚೆಲುವಿನ ಸಣ್ಣೂರಲ್ಲಿ ಅತ್ಯಾನಂದದ ದಿನಗಳನ್ನು ಕಳೆದುದೂ, ಜಗದೀಶನ ಬಾಲ್ಯವೂ, ಅವನು ತಂದೆಯ ಪ್ರೀತಿಯ ಮಗು ವಾಗಿದ್ದ ದಿನಗಳೂ ಒಂದರ ಹಿಂದೊಂದಾಗಿ ತೋರಿ ಅವಳ ಮನಸ್ಸನ್ನು ಬಾಡಿಸಿದುವು. ಪಂಚೂ ಮಾಡಿದ ದ್ರೋಹವನ್ನು ನೆನೆನೆನೆದಂತೆ ಅವಳ ಎದೆ ಕಬ್ಬಿಣದಂತೆ ಘನವಾಗಿ, ಫಡಫಡನೆ ಹೊಡೆದುಕೊಳ್ಳುತ್ತಿತ್ತು. ಈ ಮೊದಲೇ, ಈ ಊರು ಬಿಟ್ಟುಹೋಗಬೇಕೆಂಬ ಚಿಂತೆಯಲ್ಲಿ ಅವಳು ಸರಿಯಾಗಿ ಊಟಮಾಡಿ ನಾಲ್ಕು ದಿನಗಳಾಗಿದ್ದುವು. ಊರಿನವರೊಡನೆ ಕೊಟ್ಟುದನ್ನು ವಸೂಲಿಸಲಿಕ್ಕೂ, ಹೊಸ ಒಕ್ಕಲಿಗೆ ಬೇಕಾದುದನ್ನು ತೀಖರಿಸಲಿಕ್ಕೂ ಹೊತ್ತು ಸರಿಯಾಗಿಹೋಗಿತ್ತು. ಕೆಲಸಗಳ ಆಧಿಕ್ಯ ದಿಂದಲೂ, ಮನಸ್ಸಿನ ಚಿಂತೆಯಿಂದಲೂ ಬಲಹೀನವಾಗಿದ್ದ ಅವಳು, ಒಂದೂ ತೋರದವಳಾಗಿ, ನಡುವೇ ಎಳೆದುಹಾಕಿದ್ದ ಪೆಟ್ಟಿಗೆಯ ಮೇಲೆ ಕುಳಿತು, ಮುತ್ತು ಮುತ್ತಾಗಿ ಕಣ್ಣೀರು ಬಿಡಲಾರಂಭಿಸಿದಳು.

"ಅಮ್ಮಾ! ಇನ್ನೂ ಏನುಮಾಡಿಕೊಂಡಿದ್ದಿ? ಗಂಟೆ ಹತ್ತಾಗಿ ಹೋಯಿತಲ್ಲಾ. ನೀನು ಬರುತ್ತೀ ಅಂತ ನಾನು ಎಚ್ಚರವಾಗಿದ್ದೇನೆ. ಇನ್ನೂ ಏನುಮಾಡುತ್ತಿಯಮ್ಮ? ನಾನೂ ರಂಗನೂ ಸೇರಿ ಮಾಡಿಬಿಡು ತ್ತೇವೆ" ಎಂದನು ಜಗದೀಶ.

"ಬರುತ್ತೇನಪ್ಪ. ಕೆಲಸವೇನೂ ಹೆಚ್ಚಿಲ್ಲಪ್ಪ. ಭ್ರಮೆ ಹಿಡಿದು ನಿಂತು ನಿಂತೇ ಹೊತ್ತು ಹೋಗಿಬಿಡುತ್ತದೆ. ಮರೆತು ಮರೆತು ಹೋಗುತ್ತೆ.

ಒಂದು ಹಗ್ಗಕ್ಕಾಗಿ ಮೂರು ಸರ್ತಿ ಒಳಗೆ ಹೊರಗೆ ಹೋದೆ'' ಎನ್ನುತ್ತಾ ಬಾಗಿಲು ತಾಳಹಾಕಿ ಮಗನ ಬಳಿಯಲ್ಲಿ ಬಂದು ಕುಳಿತಳು.

''ಅಮ್ಮ ಇನ್ನೊಂದು ಯೋಚನೆ ಮಾಡಿದ್ದೇನೆ. ನಿನಗೂ ಸರಿ ಅಂತ ತೋರಿದರೆ ಹಾಗೇ ಮಾಡಬಹುದು. ಮದರಾಸಿನಲ್ಲಿ ಹೊಸ ಒಕ್ಕಲು ಮಾಡಿಕೊಂಡಮೇಲೆ ಯಾತ್ರೆ ಹೊರಡುವುದಾದರೆ ಪ್ರಯಾಸ ವಾಗುತ್ತದೆ. ಅಲ್ಲದೆ ತಂದೆಯನ್ನು ಹುಡುಕಲಿಕ್ಕೂ ಇದೊಂದು ಸಂದರ್ಭ ವಾಗಿ ಮಾಡಿಕೊಳ್ಳಬಹುದು. ನೋಡಿದ ಗುರುತಿಲ್ಲದೆ ಇದುವರೆಗೆ ನಾನು ಹುಡುಕಿದುದರಲ್ಲಿ ಏನೂ ಪ್ರಯೋಜನವಾಗಲಿಲ್ಲ. ಹ್ಯಾಗಿದ್ದರೂ ನೀನು ಗುರುತು ಹಿಡಿಯಬಲ್ಲಿಯಷ್ಟೆ? ಯಾವಳೊ ಕೊರವಂಜಿ ಬೇಗದಲ್ಲಿಯೇ ಅವರನ್ನು ಕಾಣುತ್ತೀ ಎಂದಳಲ್ಲವೆ? ಒಂದುವೇಳೆ ಯಾವ ಊರಿನಲ್ಲಿ ಯಾದರೂ ಸಂಧಿಸುವಹಾಗೆ ಆದೀತು. ಆದ್ದರಿಂದ ನೀನೂ ಅತ್ತೆಯವರೂ ಮೊದಲು ಕನ್ಯಾಕುಮಾರಿಗೆ ಹೋಗಿ, ಅಲ್ಲಿಂದ ಒಂದು ದಿನಕ್ಕೆ ಮೇಲೆ ಎಲ್ಲಿಯೂ ನಿಲ್ಲದೆ ಎಲ್ಲೆಲ್ಲಿ ಹೋಗಬೇಕೆಂದು ನಿನಗಿಷ್ಟವೋ ಅಲ್ಲಿಗೆಲ್ಲಾ ಹೋಗಿ, ಒಂದೆರಡು ತಿಂಗಳೊಳಗೆ ಮದರಾಸಿಗೆ ಬಂದು ಸೇರಿಬಿಡಿ. ಜತೆಗೆ ರಂಗ ಇದ್ದಾನೆ. ಒಳ್ಳೆ ಹುಡುಗ. ಖರ್ಚು ಏನಾಗುವುದೋ ನಾನು ನೋಡಿಕೊಳ್ಳುತ್ತೇನೆ'' ಎಂದನು.

''ಅಪ್ಪಾ ಜಗದೀಶಾ! ನಾನು ಹೇಳುವುದನ್ನು ಕೇಳು. ಅಮ್ಮ ಮಹಾ ಪಿಸುನಾರಿ ಅಂತ ಆಲೋಚನೆ ಮಾಡಿಬಿಡಬೇಡ. ಅತ್ತೆಯನ್ನು ಕೂಡ ಕರೆದುಕೊಂಡುಹೋಗುವುದರಲ್ಲಿ ನನಗೆ ಇಮ್ಮಡಿ ಸಂತೋಷ. ಆದರೆ ಕಾಲನ್ನು ಸರಿಯಾಗಿ ಊರಿಕೊಂಡಲ್ಲವೇ ಕೈಯನ್ನು ಇಡಬೇಕು? ನಿನ್ನ ವರಮಾನವು ಒಂದು ಕ್ರಮಕ್ಕೆ ಬಂದುಬಿಟ್ಟರೆ ಮತ್ತೆ ಏನುಬೇಕಾದರೂ ಮಾಡಬಹುದು. ನಾಳೆ ಬೆಳಿಗ್ಗೆ ತಲೆನೋವು ಅಂತ ಮಲಗಿಬಿಟ್ಟರೆ ಯಾರು ತಾನೇ ಬಂದು ನೋಡುತ್ತಾರೆ? ಕೈಯಲ್ಲಿ ನಾಲ್ಕುದುಡ್ಡು ಓಡಾಡುತ್ತಿದ್ದ ರಷ್ಟೇ ಏನುಮಾಡಲಿಕ್ಕೂ ತೋರೀತು. ಹಾಗಿರುವಾಗ ಆರಂಭದಲ್ಲಿಯೇ ಯಾತ್ರೆಗೆ ಪ್ರಾರಂಭಿಸುವುದೆಂದರೆ, ನಿನ್ನಿಂದ ಖರ್ಚುಮಾಡಲು ಸಾಧ್ಯ ವಾದೀತೆ? ಒಳಿತು ಕೆಡುಕುಗಳನ್ನೆಲ್ಲಾ ತೀರ ಆಲೋಚನೆ ಮಾಡಿಕೊಂಡ ಲ್ಲವೇ ಒಂದು ಕೆಲಸಕ್ಕೆ ಇಳಿಯಬೇಕು? ನನಗೊಂದೂ ತಡೆಯಿಲ್ಲ.''

"ಹಣವನ್ನು ಖರ್ಚುಮಾಡಲು ಸಾಧ್ಯವಾದೀತೆಂಬ ಧೈರ್ಯ ದಿಂದಲೇ ಗೌರತ್ತೆಯೊಂದಿಗೆ ಹೊರಡೋಣ ಎನ್ನುತ್ತೇನೆ. ಯಾವುದಕ್ಕೂ ನೀನು ಅತ್ತೆಯನ್ನು ಕಂಡು ಮಾತಾಡಿ ತೀರ್ಮಾನಿಸಿಕೊಂಡು, ಒಂದು ಒಳ್ಳೆ ದಿನವನ್ನು ನೋಡಿ ಹೊರಡುವ ಏರ್ಪಾಡು ಮಾಡು. ಹೊತ್ತಾಯಿತು ಮಲಗೋಣ. ಈ ಸಂಗತಿಗಳನ್ನೆಲ್ಲಾ ಬಗೆಹರಿಸಿಕೊಂಡೇ ಉಳಿದ ವಿಷಯ ಗಳ ಕಡೆಗೆ ಲಕ್ಷ್ಯ ಕೊಡಬೇಕಾಗಿದೆ. ನಾಳೆ ಬೆಳಗ್ಗೆ ಅತ್ತೆಯನ್ನು ಕೇಳಿ ಸಮಾಚಾರ ತಿಳಿಸಿಬಿಡು. ಎರಡು ತಿಂಗಳೊಳಗೆ ಮದರಾಸಿಗೆ ಬಂದುಬಿಡಿ" ಎಂದನು.

* * *

ಈಗ ಮೈಲಾಪುರದ "ವಸಂತ ವಿಹಾರ"ದಲ್ಲಿ ಏನು ನಡೆಯುವು ದೆಂದು ನೋಡೋಣ. ಬೆಳಗ್ಗೆ ಗಂಟೆ ಹತ್ತಾಗಿದೆ. ಶೇಷಜ್ಜಿ ಜಪಮಾಡಿ ಕೊಂಡಿದ್ದರು. ಶ್ಯಾಮಳೆ ರಾಜುವುಗೂ, ಶಾಸ್ತ್ರಿಗಳಿಗೂ ಬಡಿಸಿಕೊಂಡಿ ದ್ದಳು. ಸುಂದರಿ ತುಪ್ಪದ ಕಂಚನ್ನು ಕೈಯಲ್ಲಿ ಹಿಡಿದುಕೊಂಡು, ಏನೇನೋ ಊರಹರಟೆಯನ್ನು ಹೇಳಿಕೊಂಡಿದ್ದಳು. ನೀರನ್ನು ಬಾಯಿಗೆ ಸುರಿದು ಕೊಂಡಾಗ ಶಾಸ್ತ್ರಿಗಳಿಗೆ ಪೊರೆಯೇರಿಕೊಂಡು ಕೆನೆದು ಗಂಟಲು ಮೂಗು ಗಳನ್ನು ಸರಿಮಾಡಿಕೊಂಡು—"ರಂಗನಿಂದ ಕಾಗದವೇ ಇಲ್ಲ. ನಾಗು ಯಾವಾಗ ಬರುತ್ತಾನೊ?" ಎಂದು ಹೇಳಿಕೊಂಡರು.

"ನನ್ನನ್ನು ಕೂಡಾ ಹೊರಟು ಬಾ ಎಂದು ತಂದೆ ಬರೆದಿದ್ದಾರೆ. ಸಿಮ್ಲಾದಲ್ಲಿ ಏನೋ ಕೆಲಸ ಸಿಕ್ಕುವುದುಂಟಂತ ಕಾಣುತ್ತದೆ. 'ಸುಂದರಿ ಯನ್ನೂ ಕಳಿಸಿದರೆ ಕರಕೊಂಡು ಬಾ' ಎಂದು ಬರೆದಿದ್ದಾರೆ. ನೀವು ಏನು ಹೇಳುತ್ತೀರಿ?" ಎಂದನು ರಾಜು.

"ಸುಂದರಿ ಈ ಜ್ಯೇಷ್ಠ ಮಾಸದ ಕಡೇಗೆ ಬರಲೇನು? ನಾಗುವೂ ಬಂದುಬಿಡುತ್ತಾನೆ. ಇವಳಿಗೂ ಮೈ ಚೆನ್ನಾಗಿ ಗುಣವಾದೀತು. ಒಂದು ವೇಳೆ ಎಲ್ಲಿಯಾದರೂ ವರ ಕುದುರಿದರೆ, ಈಗ ಅಷ್ಟು ದೂರದೇಶಕ್ಕೆ ಹೋಗಿಬಿಟ್ಟರೆ ಒಡನೇ ಬರಲಿಕ್ಕಾದೀತೆ? ಸುಮ್ಮನೆ ರೈಲಿಗೆ ದುಡ್ಡು ಹಾಕಿ ಏನು ಲಾಭ? ನೀನು ಮಾತ್ರ ಹೋಗಿಬಾ, ಮದುವೆ ಬೇಗದಲ್ಲಿ ಇಲ್ಲಾಂತ

ಆದರೆ, ನಾಗುವನ್ನೋ ರಂಗನನ್ನೋ ಜತೆಮಾಡಿ ಕಳಿಸಿಬಿಡುತ್ತೇನೆ" ಎಂದರು ಶಾಸ್ತ್ರಿಗಳು.

"ರಂಗ ಬರುತ್ತಾನೇನಪ್ಪಾ" ಎಂದು ಕೇಳಿದಳು ಸುಂದರಿ.

"ಅವನಿಂದ ಕಾಗದವೇ ಬಂದಿಲ್ಲ. ಮದುವೆ ಈ ತಿಂಗಳೊಳಗೆ ನಿಶ್ಚಯವಾದರೆ ಒಳ್ಳೇದು. ಇನ್ನು ತಡಮಾಡಬಾರದು. ಏನು ಮಾಡು ತ್ತೇನೋ ಏನೋ" ಎಂದು ನಿಟ್ಟುಸಿರುಬಿಟ್ಟರು.

"ಪೋಸ್ಟ್! ಪೋಸ್ಟ್!" ಎಂಬ ಸದ್ದು ಕೇಳಿ, ಎದ್ದು ಹೋದರು ಶೇಷಜ್ಜಿ. "ಒಂದು ಕಾರ್ಡೂ ಮೂವತ್ತು ರೂಪಾಯಿ ಮನಿಯಾರ್ಡೂ" ಎಂದಳು ಸುಂದರಿ. "ಮಣಿಯಾರ್ಡು ಫಾರಮ್ ತಕ್ಕೋ. ಕಾರ್ಡನ್ನು ಇತ್ತ ತಾ" ಎಂದು ಶಾಸ್ತ್ರಿಗಳು, ಕಾರ್ಡನ್ನು ಕೈಯಲ್ಲಿ ಹಿಡಿದು ನೋಡುತ್ತ —"ರಂಗ ಬರೆದಿದ್ದಾನೆ. ಕ್ಷೇತ್ರಯಾತ್ರೆಗೆ ಹೋಗುತ್ತಾನಂತೆ. ಸಂಬಳ ವನ್ನು ಮಣಿಯಾರ್ಡರು ಮಾಡಿರುತ್ತಾನೆ. ಏನು ಕೆಲಸ, ಏನು ಸಂಗತಿ ಎಂಬುದೇನೂ ಇಲ್ಲ. ಏನೋ ಇಷ್ಟೊಂದಾದದ್ದು ಸಂತೋಷ" ಎಂದರು.

ಶೇಷಜ್ಜಿಗೆ ಸಂತೋಷ ತಾಳಲಾಗಲಿಲ್ಲ. ಸತ್ಯಕ್ಕೆ ರಂಗನು ಹೈಕೋರ್ಟ್ ಜಡ್ಜಾದರೆ ಕೂಡ ಅವರಿಗೆ ಅಷ್ಟು ಸಂತೋಷವಾಗದು. "ನನ್ನ ಬಂಗಾರದವ. ಸಣ್ಣ ಕಂದ ಮೊದಲೇ ಅಸಾಧ್ಯಚುರುಕು. ಅವನ ಎಳೆ ಕೈಯಿಂದ ಸಂಪಾದನೆಮಾಡಿ, ಕುಟುಂಬದ ಸ್ಥಿತಿಯನ್ನು ತಿಳಿದುಕೊಂಡು ಕಳಿಸಿದನಲ್ಲ! ಮೂವತ್ತು ರೂಪಾಯಿಯೋ ಸಂಬಳ ಅಂತ ಬರೆದಿದ್ದನಲ್ಲ? ಅವನ ಖರ್ಚಿಗೆ ಏನುಮಾಡ್ತಾನೆ! ಪಾಪ! ಹುಚ್ಚ ಹುಡುಗ! ಎಲ್ಲಾನೂ ಕಳಿಸಿಬಿಟ್ಟಿತಲ್ಲ ಮಗು?" ಎಂದು ಮೊಮ್ಮಗನನ್ನು ಸ್ತುತಿಮಾಡಿದರು.

* * *

ಸಂಜೆ ಸುಮಾರು ನಾಲ್ಕುಗಂಟೆಯ ವೇಳೆ. ಉಪಾಹಾರ ಮುಗಿದಿತ್ತು. ಅಂಗಳದ ಬದಿಯಲ್ಲಿದ್ದ ಹೂವಿನ ಗಿಡಗಳಿಗೆ ನೀರೆರೆದು, ತಲೆಯನ್ನು ಆರಿಸುತ್ತಿದ್ದಳು ಶ್ಯಾಮಳೆ. ಅವಳ ಮೈ ಮಾತ್ರ ಅಲ್ಲಿತ್ತೇ ಹೊರತು, ಮನಸ್ಸು ಮತ್ತೆಲ್ಲಿಯೋ ಸಂಚರಿಸಿಕೊಂಡಿತ್ತು. ಮಗು ಕೃಷ್ಣ ಕೊಂಚ ಅಂಬೆಗಾಲಿಕ್ಕುವುದೂ, ಕೊಂಚ ತಪ್ಪೆಜ್ಜೆ ಹಾಕುವುದೂ, ಅವಳ ನಿಡು ಗೂದಲನ್ನು ಹಿಡಿದೆಳೆಯುವುದೂ ಹೀಗೆ ಆಟವಾಡುತ್ತಿದ್ದ.

ಯೋಚನೆಯಲ್ಲಿ ಮುಳುಗಿದ್ದ ಶ್ಯಾಮಳೆ, ಮನೆಯ ಇದಿರಿನಲ್ಲಿ ಒಬ್ಬ ಸುಂದರ ತರುಣ ಬೀದಿಯ ಬದಿಯೇ ನಡೆದುಬರುವುದನ್ನು ನೋಡಿದಳು. ಯಾರಾದರೂ ಗುರುತಿನವರಿರಬಹುದೋ ಎಂದು ಸ್ವಲ್ಪ ತೀಕ್ಷ್ಣವಾಗಿ ನೋಡಿದಳು. ಬಂದವನು ನೇರಾಗಿ "ವಸಂತ ವಿಹಾರ"ಕ್ಕೇ ಬಂದು ಗೇಟನ್ನು ದಾಟಿ ಮನೆಯಂಗಳವನ್ನು ಹೊಕ್ಕು, ಮೆಟ್ಟಿಲನ್ನು ಸಮೀಪಿಸಿದನು.

ಅದುವರೆಗೆ ಪ್ರಜ್ಞೆಯೇ ಇಲ್ಲದಂತಿದ್ದ ಶ್ಯಾಮಳೆ ಮೆಟ್ಟಿಬಿದ್ದಳು. ತಟಕ್ಕನೆ ತಲೆಯನ್ನು ಸೂಡಿಹಾಕಿಕೊಂಡು, ಮಗುವನ್ನೆತ್ತಿಕೊಳ್ಳುವ ಹೊತ್ತಿಗೆ ಬಂದವನೂ ಸಮೀಪಿಸಿಬಿಟ್ಟನು.

"ಪತಂಜಲಿ ಶಾಸ್ತ್ರಿಗಳ ಮನೆ ಇದು ತಾನೆ?"

"ಹೌದು. ದೇವಾಲಯಕ್ಕೆ ಹೋಗಿದ್ದಾರೆ. ಇನ್ನೊಂದು ಅರ್ಧ ಗಂಟೆಯಲ್ಲಿ ಬಂದಾರು. ಕೊಂಚ ಕುಳಿತರೆ ನೋಡಬಹುದು."

"ಇಲ್ಲ. ಕುಳಿತುಕೊಳ್ಳಲಿಕ್ಕೆ ಹೊತ್ತಿಲ್ಲ. ರಂಗಸ್ವಾಮಿ ಇದನ್ನು ಅವರಿಗೆ ಕೊಡಲಿಕ್ಕೆ ಹೇಳಿದ್ದಾನೆ."

"ಅಜ್ಜಿಯನ್ನು ಕರೆಯುತ್ತೇನೆ" ಎಂದು ಶ್ಯಾಮಳೆ ಲಗುಬಗೆಯಿಂದ ಒಳಗೆ ಹೊಕ್ಕಳು.

"ಮತ್ತೇನೂ ವಿಶೇಷವಿಲ್ಲ. ಇದನ್ನು ಅವರ ಕೈಗೆ ಕೊಟ್ಟುಬಿಟ್ಟರಾಯಿತು" ಎಂದು ಬಹಳ ಮರ್ಯಾದೆಯಿಂದ ಒಂದು ಕವರನ್ನು ನೀಡಿದನು ಬಂದವನು.

ಶ್ಯಾಮಳೆ ಕೊಂಚ ನಿಂತಳು. ಅವಳನ್ನೆ ಮೀರಿಕೊಂಡು ಅವಳ ಕಣ್ಣುಗಳು ಬಂದವನನ್ನು ನೋಡುತ್ತಿದ್ದುವು. "ಕವರನ್ನು ತೆಗೆದುಕೊಳ್ಳುವಾಗ ಅವನೂ ತನ್ನನ್ನು ಸೂಕ್ಷ್ಮವಾಗಿ ನೋಡುತ್ತಿದ್ದಾನೆಂದು ಅವಳಿಗೆ ತಿಳಿಯಿತು.

ಬೇಗಬೇಗನೇ ಗೇಟನ್ನು ದಾಟಿ ಹೊರಟುಹೋದನು ಬಂದವನು. ಅವನು ಬೀದಿಯ ತಲೆಯವರೆಗೆ ಹೋಗಿ ಮರೆಯಾಗುವವರೆಗೂ ಅವನನ್ನೇ ನೋಡುತ್ತ ನಿಂತಿದ್ದಳು ಶ್ಯಾಮಳೆ. ಆಗ ಅವನು ಒಂದೆರಡು ಬಾರಿ ತನ್ನನ್ನು ತಿರುಗಿ ನೋಡಿದಾಗ ತಲೆ ತಗ್ಗಿಸಿಕೊಂಡಳು.

ಅಜ್ಜಿಯೊಡನೆ ಸಂಗತಿಯನ್ನು ಹೇಳಿ ಕಾಗದವನ್ನು ಕೊಟ್ಟಳು. ಅಜ್ಜಿಯ ಸಂತೋಷ ಕರೆಹೊರಳಿಸಿಕೊಂಡು ಹೋಗುತ್ತಿತ್ತು.

ಶಾಸ್ತ್ರಿಗಳು ಬಂದಮೇಲೆ ಆ ಕಾಗದವನ್ನು ಬಿಡಿಸಿ ನೋಡಿ,— "ಕಾಗದ ತಂದವನ ಹೆಸರನ್ನಾಗಲಿ ವಿಳಾಸವನ್ನಾಗಲಿ ಕೇಳಿದೆಯಾ?" ಎಂದರು.

"ಇಲ್ಲ."

"ಅಯ್ಯೋ ದಡ್ಡೀ! ವಿಳಾಸ ಗೊತ್ತಾದರೆ ಹೋಗಿ ವಿಚಾರಿಸಬಹುದಿತ್ತು!" ಎಂದರು ಶೇಷಜ್ಜಿ.

"ಏನಮ್ಮ? ನೀನು ಏಳುತಲೆ ಪರಂಪರೆಯಿಂದ ಹಿಡಿದು ವಿಚಾರಿಸುವವಳಾಯಿತಲ್ಲ? ಅವನು ಯಾರು ಏನು ಅಂತ ಕೇಳಲಿಲ್ಲವೇ ನೀನಾದರೂ?" ಎಂದರು ಶಾಸ್ತ್ರಿಗಳು.

"ಬರೇ ಜಡ ಹುಡುಗಿ. ನನ್ನೊಡನೆ ಅವನು ಬಂದ ಸಂಗತಿ ಆಗ ಹೇಳ್ಲೇ ಇಲ್ಲ ಇವಳು" ಎಂದರು ಅಜ್ಜಿ.

ಶ್ಯಾಮಳೆ ಉತ್ತರ ಕೊಡಲೇನೂ ತೋರದೆ ಪಿಳಿಪಿಳಿ ಕಣ್ಣುಬಿಟ್ಟಳು.

*　　　　*　　　　*

ನಟ್ಟಿರುಳು. ಆ ನಿಶ್ಶಬ ವಾದ ವೇಳೆಯಲ್ಲಿ, ಒಂದೇ ಒಂದು ಪ್ರಾಣಿ ಮಾತ್ರ ನಿದ್ರೆಬಾರದೆ ಹಾಸಿಗೆಯಲ್ಲಿ ಹೊರಳುತ್ತ ಯೋಚನೆ ಮಾಡುತ್ತಿತ್ತು. ಅವಳೇ ಶ್ಯಾಮಳೆ. "ಕಣ್ಣುಗಳು ಅಂಟುಹಾಕಿ ಅಂಟಿಸಿದರೂ ನಿದ್ದೆ ಬಾರದೂಂತ ಕಾಣುತ್ತದೆ. ಇದೇನು? ಅವರು ಯಾರೋ! ಒಂದೇ ಬಾರಿ ನನ್ನ ಹೃದಯದೊಳಗೆ ಪ್ರವೇಶಿಸಿಬಿಟ್ಟರಲ್ಲ! ಎಂಥ ಜಾತಿಯೋ? ಎಂಥ ಕುಲವೊ? ಏನು ಕೆಲಸವೊ? ಯಾವ ಅಂತಸ್ತಿನವರೊ? ಛೀ ಛೀ! ಈ ಯೋಚನೆ ಪೂರ್ಣವಾಗಿ ಮರೆತುಬಿಡಬೇಕು...." ಎಂದು ನೆನೆದು ಕಣ್ಣುಗಳನ್ನು ಮುಚ್ಚಿದಳು. "ಕಣ್ಣುಗಳನ್ನು ಮುಚ್ಚಿದರೂ ಅವರ ಆಕೃತಿಯೇ ಕಾಣುತ್ತದೆ! ಏನು ಮಾಡಿಯೇನು? ಹಿಂದು ಮುಂದು ಗೊತ್ತಿಲ್ಲ! ಸಾಯಂಕಾಲ ಒಂದೇ ಒಂದು ನಿಮಿಷ ನೋಡಿದ್ದು! ಹೀಗೂ ಉಂಟೆ? ಎಂದೂ ಇಲ್ಲದಂತೆ ಹೀಗೇಕಾಗುತ್ತದೆ? ಅವರನ್ನು ಇನ್ನೊಮ್ಮೆ

ನೋಡಬೇಕಂತ ಕಾಣುತ್ತದಲ್ಲ? ಏನೆಂದು ಹೇಳಲಾಗದಂತೆ ಏನೋ ಆಯಿತು ನನಗೆ! ಇದನ್ನು ಯಾರಿಗೆ ಹೇಳಲಿ? ನಾಚಿಕೆಯಾಗುತ್ತದಲ್ಲ! ····ಯಾವುದಕ್ಕೂ ರಂಗ ಬರಲಿ. ಇವರು ಯಾರೆಂದು ಕೇಳುವ···· ಒಂದು ವೇಳೆ ಈ ಮೊದಲೇ ಮದುವೆಯಾದವರಾಗಿದ್ದರೆ······ಅಲ್ಲದೆ ನನ್ನನ್ನು ವರಿಸಲು ಒಪ್ಪದಿದ್ದರೆ····ಹಾ! ದೇವರೆ! ನಿಮ್ಮ ಚಿತ್ತ ಹೇಗೋ····" ಎಂದು ಹಲಬಗೆಯಾಗಿ ಎಣಿಸುತ್ತ ಹಾಗೆಯೇ ನಿದ್ರೆ ಯಲ್ಲಿ ಲೀನಳಾದಳು.

# ಬಿಡುಗಡೆ

ಮದುವೆಯ ಮಾಸಗಳು ಒಂದರ ಹಿಂದೊಂದಾಗಿ ಓಡಿಕೊಂಡಿದ್ದುವು. ಪತಂಜಲಿ ಶಾಸ್ತ್ರಿಗಳು 'ವರ–ವರ' ಎಂದು ಅಲೆಯುತ್ತಿದ್ದರು. ಏನು ಮಾಡುವರು ಪಾಪ! ಬೆಳಗ್ಗಿನಿಂದ ಊರು ಸುತ್ತುವುದೇ ಕೆಲಸ. ಶೇಷಜ್ಜಿಯೋ ಮದುವೆಗೆ ಬೇಕಾದ ಹಪ್ಪಳ–ಸಂಡಿಗೆ ಮೊದಲಾದುವನ್ನು ತಯಾರಿಸುವುದರಲ್ಲಿಯೇ ಈಡಾಗಿದ್ದರು.

ಅಂದು ಬೆಳಗ್ಗೆ ಆಕಸ್ಮಿಕವಾಗಿ ನಾಗು, ಜೈಲಿನಿಂದ ಬಿಡುಗಡೆಹೊಂದಿ ಬಂದುಬಿಟ್ಟ. "ಅಜ್ಜೀ! ಅಡ್ಡಬಿದ್ದೇ" ಎಂಬ ಧ್ವನಿ ಕೇಳಿ ತಲೆಯೆತ್ತಿ ನೋಡಿದ ಶೇಷಜ್ಜಿ, ಅಭಿವಾದನ ಮಾಡುತ್ತಿರುವ ಮೊಮ್ಮಗನನ್ನು ನೋಡಿದರು.

ಶಾಸ್ತ್ರಿಗಳು ಧಡಧಡನೆ ಬಂದು, ಕೋಣೆಯ ಬಾಗಿಲನ್ನು ತಾಳ ಹಾಕಿಬಿಟ್ಟರು. ತನ್ನ ಮೇಲಿನ ಕೋಪದಿಂದ ಅವರು ಹಾಗೆ ಮಾಡುವರೇನೋ ಎಂದು, ನಾಗು ಅವರನ್ನು ಚುರಚುರನೆ ನೋಡಿದನು.

ಅವರು ಬಾಯಿಗೆ ಬೆರಳಿಟ್ಟುಕೊಂಡು, "ಉಸ್! ಗಟ್ಟಿಯಾಗಿ ಮಾತಾಡದಿರು. ನೇರಾಗಿ ಮಹಡಿಗೆ ಹೋಗು. ನಾನು ಕರೆದಮೇಲೆ ಬಾ" ಎಂದು ಮೆಲ್ಲನೆ ಹೇಳಿದರು.

ನಾಗರಾಜನು ಬೆಕ್ಕಿನಂತೆ ನಡೆದು ಮಹಡಿಗೆ ಹೋದನು. ಅವನು ಹೊರಟುಹೋಗುವವರೆಗೆ ಕಾದಿದ್ದ ಶಾಸ್ತ್ರಿಗಳು, "ಲಕ್ಷ್ಮಿ! ಲಕ್ಷ್ಮಿ!" ಎಂದು ಅನುತಾಪದ ಸ್ವರದಲ್ಲಿ ಕರೆದರು. ಉಡಿಯಲ್ಲಿ ಕೃಷ್ಣನನ್ನೆತ್ತಿಕೊಂಡು ನಗುಮೊಗದಿಂದ ಲಕ್ಷ್ಮಮ್ಮ ಬಂದಳು. ಶೇಷಜ್ಜಿ ಅವಳ ಬಳಿಗೆ ಹೋಗಿ, "ಅಮ್ಮಾ ಲಕ್ಷ್ಮಿ! ನಾಗು ಬರುತ್ತಾನಂತೆ. ಬರಲಿಕ್ಕೆ ಹೇಳಲಾ?" ಎಂದು ಹೇಳಿ, ಏನು ಉತ್ತರ ಹೇಳುವಳೋ ಎಂದು ಅವಳ ಮುಖವನ್ನೂ ಶಾಸ್ತ್ರಿಯವರ ಮುಖವನ್ನೂ ಮತ್ತೆ ಮತ್ತೆ ನೋಡಿದರು.

ಲಕ್ಷ್ಮಮ್ಮನ ಮುಖದಲ್ಲಿ ಮುಗುಳ್ನಗೆಯಾಡಿತು. ಕಣ್ಣಿನಲ್ಲಿ ಸಂತೋಷವು ಜ್ವಲಿಸಿತು. "ಬರುವುದಾದರೆ ಬರಲೇನು? ನಿಮ್ಮಿಷ್ಟ.

ನೀವು ನೋಡಿ ಏನುಮಾಡಿದರೂ ಸರಿ. ಮಗುವನ್ನು ಕಣ್ಣಾರೆ ಕಂಡು ಎಷ್ಟೋ ದಿನವಾಯಿತು. ಇಷ್ಟುದಿನ ಎಲ್ಲಿದ್ದನೋ?" ಎಂದು ಕೇಳಿದಳು.

ಸ್ವಲ್ಪ ಹೆಚ್ಚುಕಡಮೆ ಬುದ್ಧಿ ತಿಳಿಯಾಗಿದ್ದರೂ, ಪೂರ್ಣ ನೆಮ್ಮದಿಯಾಗಿಲ್ಲವೆಂಬುದನ್ನರಿತ ಅಜ್ಜಿ "ಕರೆಯಲೆ?" ಎಂದು ಕೇಳಿದರು.

"ಚೆನ್ನಾಗಿದೆ. ನನ್ನ ಕೇಳೋದೇನು?" ಎಂದು ಹೇಳುತ್ತಾ ಕೃಷ್ಣನನ್ನು ಕೆಳಕ್ಕಿಳಿಸಿದಳು.

ಶೇಷಜ್ಜಿ—"ಅಪ್ಪಾ ನಾಗರಾಜಾ! ಬಾರೋಪ್ಪಾ! ಅಮ್ಮ ಬಂದಿದ್ದಾಳೆ" ಎನ್ನಲು ನಾಗರಾಜ ಇಳಿದು ಬಂದನು. ಸೊರಗಿ ಕಡ್ಡಿಯಾಗಿದ್ದ ತಾಯಿಯನ್ನು ಕಾಣುತ್ತಲೇ ಅವನಿಗೆ ದುಃಖವು ಉಕ್ಕಿಬಂದಿತು. ಅದರೊಂದಿಗೆ ಕಲ್ಯಾಣಿಯ ನೆನಪೂ ಬಂದುಬಿಟ್ಟಿತು. "ಅಮ್ಮಾ!" ಎಂದು ಅಬಲಹುಡುಗಿಯ ಹಾಗೆ ಅತ್ತುಬಿಟ್ಟನು. ಅವಳೂ ಅವನೊಂದಿಗೆ ಅಳತೊಡಗಿದಳು. ಶೇಷಜ್ಜಿಯೂ ಶಾಸ್ತ್ರಿಗಳೂ "ಅಳಲಿ, ಅತ್ತರೆ ದುಃಖವು ತಣಿದೀತು. ಮನದೊಳಗೆ ಇಟ್ಟುಕೊಂಡು ಮರುಗಿ ಮರುಗಿಯೇ ಪಿತ್ಥ ಏರಿಬಿಟ್ಟದ್ದು" ಎಂದು ಹೇಳಿ ಮೆಲ್ಲನೆ ಅತ್ತ ಜಾರಿದರು.

ಶ್ಯಾಮಳೆಯೂ ಸುಂದರಿಯೂ ಅಲ್ಲಿಗೆ ಬರಬೇಕೋ ಬೇಡವೋ ಎಂದರಿಯದವರಾಗಿ, ಬಾಗಿಲ ಬಳಿಯಲ್ಲಿ ನಿಂತು ಇಣಿಕಿ ನೋಡಿದರು. ಕೋಣೆಯೊಳಗಿನ ನೋಟವು ಎಂತಹ ಕಲ್ಮನವನ್ನಾದರೂ ಕರಗಿಸುವಂತಿತ್ತು. ತಾಯಿಯೂ ಮಗನೂ ಒಬ್ಬರನ್ನೊಬ್ಬರು ಸಮಜಾಯಿಸಿಕೊಳ್ಳಲಾರದೆ, ತಲೆತಗ್ಗಿಸಿ ಕುಳಿತುಬಿಟ್ಟಿದ್ದರು. ಮಗು ಕೃಷ್ಣ ತನ್ನ ತಾಯಿಯನ್ನು ಎದ್ದು ನಿಲ್ಲುವಂತೆ ಸನ್ನೆ ಮಾಡುತ್ತ ಅವಳ ಸೆರಗನ್ನು ಹಿಡಿದೆಳೆಯುತ್ತಿದ್ದನು.

"ಅಯ್ಯೋ! ಅಮ್ಮ! ಏನಾಯಿತು ನಿನಗೆ! ಎಂಥ ಅವಸ್ಥೆ ಅಮ್ಮಾ! ನಾನು ಬಂದುಬಿಟ್ಟೆನಲ್ಲ? ಏಳಮ್ಮ. ಇನ್ನೆಲ್ಲಿಗೂ ಹೋಗುವುದಿಲ್ಲ" ಎಂದು ನಾಗು ಅಂಗಲಾಚಿದನು.

ಆನಂದಾಧಿಕ್ಯದಿಂದ ಎಲ್ಲಿ ಹೃದಯ ನಿಂತಿತೇನೋ ಎಂದು ಹೆದರಿಕೊಂಡು, ಶೇಷಜ್ಜಿಯೂ ಶಾಸ್ತ್ರಿಗಳೂ ಓಡಿಬಂದರು. ಅವರೊಂದಿಗೆ ಶ್ಯಾಮಳೆಯೂ ಸುಂದರಿಯೂ ಬಂದರು.

ನಗುಮೊಗದಿಂದ ಲಕ್ಷ್ಮಮ್ಮ ಕಣ್ಣುಗಳನ್ನು ಮುಚ್ಚಿಕೊಂಡಿದ್ದಳು. ಶಾಸ್ತ್ರಿಗಳಿಗೆ ಸಪ್ತನಾಡಿಗಳೂ ನಿಂತಂತಾಯಿತು. ಸಂದೇಹದಿಂದ "ಲೋ ನಾಗು! ನಿನಗೆ ನಾಡಿ ನೋಡಲಿಕ್ಕೆ ಗೊತ್ತಿದೆಯಷ್ಟೆ? ಅವಳ ನಾಡೀ ಹಿಡಿದು ನೋಡು" ಎಂದರು.

ಶ್ಯಾಮಳೆ ಮೂರನೆಯ ಮನೆಯಲ್ಲಿದ್ದ ಡಾಕ್ಟರನ್ನು ಕರಕೊಂಡು ಬರಲು ಓಡಿದಳು. ನಾಗು ಕೈಯನ್ನು ಹಿಡಿದು ನೋಡಿ,—"ನಾಡಿ ತುಂಬ ಬಲಹೀನವಾಗಿರುವುದೇ ಹೊರತು, ಪ್ರಾಣಭಯವಿರುವಂತೆ ಕಾಣು ವುದಿಲ್ಲ" ಎಂದು ನಿಟ್ಟುಸಿರುಬಿಟ್ಟನು.

ಶಾಸ್ತ್ರಿಗಳು ತಲೆತಗ್ಗಿಸಿಕೊಂಡು ಕುಳಿತಿದ್ದರು. "ಠಕ್ಕ್ ಠಕ್ಕ್" ಎಂದು ಬೂಟ್ಸ್ ಶಬ್ದವು ಕೇಳಿತು. ಡಾಕ್ಟರ್ ತ್ರಿಪುರಾಂತಕ ಮುದಲಿ ಯಾರರು ಒಳಗೆ ಬಂದರು. ಶ್ಯಾಮಳೆಯೂ ಹಿಂದಿದ್ದಳು. ಡಾಕ್ಟರು ಬಹಳ ಗಡಿಬಿಡಿಯಿಂದ, "ಸ್ಟೆಥೆಸ್ಕೊಪೋ"ವನ್ನು ಸಿದ್ಧಪಡಿಸಿಕೊಂಡು ಲಕ್ಷ್ಮಮ್ಮನ ಬಳಿಗೆ ಬಂದು,—"ಒಳ್ಳೆ ಶುಧ್ಧವಾಗಿ ಗಾಳಿ ಒಳಗೆ ಬರಲಿ. ರೋಗಿಯ ಸುತ್ತುಗಟ್ಟಿ ನೀವು ಹೀಗೆ ಉಸಿರುಬಿಟ್ಟುಕೊಂಡಿದ್ದರೆ, ಇವರ ಆರೋಗ್ಯ ಏನಾದೀತು?" ಎಂದ ಒಡನೆಯೆ ಶೇಷಜ್ಜಿ ಮೆಲ್ಲನೆ ಹಿಂದೆ ಸರಿದರು. ನಾಗರಾಜನ ಮಡಿಲಮೇಲೆ ತಲೆ ಇಟ್ಟುಕೊಂಡು ಮಲಗಿದ್ದ ಲಕ್ಷ್ಮಮ್ಮನ ನಾಡಿಯನ್ನೂ ಹೃದಯವನ್ನೂ ಪರೀಕ್ಷೆಮಾಡಿ, ಏನೋ ಒಂದು ಪುಡಿಯನ್ನು ತೆಗೆದು ವಾಸನೆಗೆ ಹಿಡಿದರು. ಎರಡು ಬಾರಿ ಸೀತು, ಕಣ್ಣು ಬಿಡಿಸಿ ನೋಡಿದಳು ಲಕ್ಷ್ಮಮ್ಮ. ಆಗತಾನೇ ಶಾಸ್ತ್ರಿಗಳಿಗೆ ಜೀವ ಬಂತು. "ಪ್ರಾಣಭಯವೇನೂ ಇಲ್ಲವಷ್ಟೆ?" ಎಂದು ಕೇಳಿದರು.

"ಅದೇನಿಲ್ಲ, ತುಂಬ ಬಲಹೀನದಿಂದ ಬಂದ ಮೂರ್ಛೆ. ಒಳ್ಳೆ ಮಜ್ಜಿಗೆ ಒಂದು ಟಮ್ಲರ್ ಕೊಡಿರಿ. ಇನ್ನೊಂದು ಅರ್ಧ ಗಂಟೆಯಲ್ಲಿ ಸರಿಯಾಗಿಬಿಡುತ್ತಾರೆ" ಎಂದರು.

ಲಕ್ಷ್ಮಮ್ಮನಿಗೆ ಪೂರ್ಣ ಗುಣವಾಗಿಬಿಟ್ಟಿತು. ಮರು ವಾರದಲ್ಲಿ ರಂಗನು ಬರುವುದಾಗಿಯೂ, ಆದರೆ ರೈಲಿಳಿದ ಕೂಡಲೇ ಬೆಳಗ್ಗೆಯೇ ಬರಲಾಗುವುದಿಲ್ಲವೆಂದೂ, ಕ್ಷೇತ್ರಯಾತ್ರೆಗಾಗಿ ತನ್ನ ಮೇಲಧಿಕಾರಿಯ ತಾಯಿಯವರನ್ನೂ, ಅವರ ಬಂಧುವಾದ ಇನ್ನೊಬ್ಬರನ್ನೂ ಕರೆದುಕೊಂಡು

ಬಂದು, ಅವರೊಡನೆಯೇ ಹೋಗಿ ಸಂಜೆಯಲ್ಲಿ ಮನೆಗೆ ಬರುವುದಾಗಿಯೂ ಬರೆದಿದ್ದನು. ನಾಗುವಿಗೂ ಬೇರೊಂದು ಕಾಗದವನ್ನಿಟ್ಟಿದ್ದನು.

ನಾಗುವಿನ ಕಾಗದದಲ್ಲಿ—"ಶ್ಯಾಮಳೆಯ ಮದುವೆಯ ವಿಷಯವಾಗಿ ಏನೂ ಚಿಂತಿಸುವುದು ಬೇಡ. ನಾನು ಒಂದು ವರನನ್ನು ತೀರ್ಮಾನಿಸಿದ್ದೇನೆ. ಬಂದಮೇಲೆ ಹೆಚ್ಚಿನ ವಿವರಗಳನ್ನು ಹೇಳುತ್ತೇನೆ" ಎಂದು ಬರೆದಿದ್ದನು. ಕಾಗದಗಳನ್ನು ಓದಿ ಮುಗಿಸುವವರೆಗೆ, ಮೌನವಾಗಿದ್ದ ಶೇಷಜ್ಜಿ—"ಏನೋ ಅಪ್ಪ! ಹ್ಯಾಗಾದರೂ ಕೊರಳಿಗೆ ಮೂರುಗಂಟು ಬಿದ್ದ ಮೇಲೆಯೇ ನಿಶ್ಚಯ. ಅದೇನು ಯೋಚನೆಯೋ ಅವನು ಬಂದರೆಯೇ ಗೊತ್ತಾಗುತ್ತದೆ. ಅಷ್ಟೊಂದಾದರೂ ತಂಗಿಗೊಂದು ಮದುವೆಯಾಗಬೇಕೂ ಅಂತ ಗೊತ್ತಾಗುತ್ತದಲ್ಲಾ ಅದೇ ಸಂತೋಷ. ಇವನೊಬ್ಬ ಸಣ್ಣ ಗಾಂಧಿಯಾಗಿಬಿಟ್ಟ. ದೇಶವನ್ನೇ ತಲೇಮೇಲೆ ಹೊತ್ತುಕೊಂಡಿದ್ದಾನೆ. ಮನೆ ವಿಷಯವೊಂದೂ ಗಮನಿಸಲಾರ" ಎಂದು ಹೇಳುತಿದ್ದಾಗ ನಾಗರಾಜನು ಎದ್ದು ನಡೆದನು.

ಅಜ್ಜಿಯ ಮಾತುಗಳು ಅವನ ಕಿವಿಗಳಲ್ಲಿ ಪ್ರತಿಧ್ವನಿಗೊಡುತ್ತಿದ್ದುವು. ಏನು ಮಾಡಿಯಾನು? ಕೆಲಸವೋ ಒಂದೂ ಸಿಕ್ಕಿಲ್ಲ. ಇದುವರೆಗೂ ಕುಟುಂಬದ ವಿಷಯದಲ್ಲಿ ಅವನೊಂದೂ ಕೈಯಾಡಿಸದಿದ್ದುದರಿಂದ, ಅಜ್ಜಿ ಕೇಳ್ಪಡಿಸಿ ಮಾತಾಡಿದ್ದು ನ್ಯಾಯವೆಂದೇ ಅವನಿಗೆ ತೋರಿತು.

ಅಂದು ರಾತ್ರಿ ಪೂರಾ ಅವನು ನಿದ್ರೆಮಾಡಲೇ ಇಲ್ಲ. "ನಾನೂ ಎಷ್ಟು ಕಷ್ಟಪಟ್ಟಾದರೂ ಒಂದು ಕೆಲಸ ಹುಡುಕಿಕೊಂಡು, ಶ್ಯಾಮಳೆಗೆ ಏನಾದರೂ ಮಾಡಲೇಬೇಕು. ನನ್ನ ಇಷ್ಟಪ್ರಕಾರ ಸೀನುವಿಗೇ ನಿಶ್ಚಯ ಮಾಡುವುದಾದರೂ, ಮೇಲುಕರ್ಚಿಗೆ ಐನೂರು ರೂಪಾಯಿಯಾದರೂ ಬೇಕು. ರಂಗ ಏನು ಸಮಾಚಾರ ತರುತ್ತಾನೋ ನೋಡೋಣ. ನಾನೂ ಹಣಕ್ಕೆ ಏನಾದರೂ ಏರ್ಪಾಡುಮಾಡಿ, ಮೆಲ್ಲನೆ ಸೀನುವಿನ ಸಂಗತಿಯನ್ನು ಅವರ ಕಿವಿಗೆ ಹಾಕುತ್ತೇನೆ. ದಿನಗಳು ಓಡುತ್ತಿವೆ. ವೈಶಾಖ ಹದಿನೈದಕ್ಕಾದರೂ ಅವನು ಬರಲಾರನೊ? ಬಂದಮೇಲೆ ಸೇರಿ ಆಲೋಚಿಸಿ ಮಾಡುವುದೇ ಒಳ್ಳೆಯದು" ಎಂದು ತನ್ನನ್ನು ತಾನೇ ಸಮಾಧಾನಪಡಿಸಿಕೊಂಡನು. ಆದರೂ ಅವನ ಮನಸ್ಸು ನೊಂದುಕೊಂಡೇ ಇತ್ತು.

"ಹೌದು. ಇಂದು ತಾನೇ ರಂಗನ ಕಾಗದ ಬಂತು. ನಾಗಣ್ಣ ಏನೋ ಒಂದು ರೀತಿಯಾಗಿದ್ದಾನೆ. ಕರೆದರೆ ಸರಿಯಾಗಿ ಮಾತೂ ಆಡುವುದಿಲ್ಲ. ಊಟವೂ ಸರಿಯಾಗಿ ಮಾಡುವುದಿಲ್ಲ. ಏಕೊ? ಅಪ್ಪ ಸಿಟ್ಟು ಮಾಡಿದರೋ ಏನೊ? ಕೆಲಸವೂ ಇಲ್ಲ. ಕುಟುಂಬದ ಚಿಂತೆ ಇಲ್ಲದಿದ್ದರೆ, ದೇವರೇ ಅಂತ ಎಲ್ಲಿಯಾದರೂ ಒಂದು ಆಶ್ರಮಕ್ಕೆ ಹೋಗಿ ಇದ್ದುಬಿಡುತ್ತಿದ್ದ. ಈಗ ಇಷ್ಟು ಮಂದಿಯನ್ನೂ ರಕ್ಷಿಸುವ ಭಾರದಲ್ಲಿ ಪಾಲುಗಾರನಾಗುವ ಕರ್ತವ್ಯವು ಅವನಿಗಿದೆ. ರೆಕ್ಕೆ ಮುರಿದ ಹಕ್ಕಿಯಹಾಗೆ ಒಬ್ಬಳು ಮುದುಕಿ, ತಾಯಿ, ತಂದೆ, ಮಗು, ಇಡೆಯಲ್ಲಿ ತಡವು ತುಂಡಾಗಿ ಬಿದ್ದಿರುವ ನಾನೊಬ್ಬಳು. ಏನುಮಾಡಿಯಾನು ಪಾಪ! ನನ್ನ ವಿಷಯವಾಗಿ ಇವನೇಕೆ ಚಿಂತೆಮಾಡಬೇಕು? ರಂಗ ಬರೆದದ್ದು ನೋಡಿದರೆ ಅವನು ಒಂದು 'ವರ' ಗೊತ್ತುಮಾಡಿದಹಾಗೆ ಕಾಣುತ್ತದೆ. ಅದು ಯಾರೋ? ಏನೋ?" ಎಂದು ಶ್ಯಾಮಳೆ ನೆನೆದಾಗ ಅವಳರಿವಿಲ್ಲದೆಯೇ 'ಕಳಕ್ಕೆ'ಂದು ನಕ್ಕುಬಿಟ್ಟಳು. ಅವಳು ನಕ್ಕ ಸದ್ದು ನಾಗುವಿನ ಕಿವಿಯಲ್ಲಿ ಹೋಗಿ ಬಿತ್ತು. ಒಂದುವೇಳೆ ಲಕ್ಷ್ಮಮ್ಮ ಮತ್ತೆ ನೋಡುವುದಕ್ಕೆ ತೊಡಗಿಬಿಟ್ಟಳೇನೋ, ಎಂದು ಸಂದೇಹಿಸಿ, ತನ್ನ ಬರುವಿಕೆ ಯಾರಿಗೂ ಗೊತ್ತಾಗದಂತೆ ಬೆಕ್ಕಿನಂತೆ ಮೆಲ್ಲಮೆಲ್ಲನೆ ಮಹಡಿಯ ಸಾವಟಿಗೆಗಳನ್ನಿಳಿದು, ಬುಡದ ಮೆಟ್ಟಿಲಲ್ಲಿ ಕುಳಿತನು.

ಕೆಲವರು ಆಲೋಚನೆ ಮಾಡುತ್ತಾ, ಕೆಲವು ಮಾತುಗಳನ್ನು ಬಾಯಿಬಿಟ್ಟು ಹೇಳಿಬಿಡುವುದೂ ಉಂಟು. ಅನಂತರ "ಯಾರೋ ಕೇಳಿಬಿಟ್ಟರೇನೋ!" ಎಂದು ಪಶ್ಚಾತ್ತಾಪಪಡುವುದೂ ಉಂಟು. ನಾಗು ಇವಳು ಏನುತಾನೇ ಹೇಳುವಳೋ ಎಂದು ಕೊಂಚ ನಿಧಾನಿಸಿಕೊಂಡು ಕುಳಿತಿದ್ದನು.

ಸಣ್ಣ ದನಿಯಲ್ಲಿ ಶ್ಯಾಮಳೆ, ಕೈಗಳಿಂದ ಅಭಿನಯಮಾಡುತ್ತ, ಒರಗು ಕುರ್ಚಿಯಲ್ಲಿ ಮಲಗಿಕೊಂಡು ತನ್ನೊಳಗೆ ತಾನೇ ಮಾತಾಡಿಕೊಳ್ಳುತ್ತಿದ್ದಳು. "ಸರಿಸರಿ. ರಂಗ ಏನು ಹೇಳಿದರೇನು? ನನ್ನಿಂದ ಅವರನ್ನು ಮರೆಯಲಿಕ್ಕೇ ಆಗದು. ಬರಲೀ, ರಂಗ ಬರಲಿ. ಉಪಾಯವಾಗಿ ಅವನೊಡನೆ ಅಂದು ಬಂದವರು ಯಾರೂ ಅಂತ ಕೇಳಿ ತಿಳಿದುಕೊಳ್ಳುತ್ತೇನೆ. ಆಮೇಲೆ ನಮ್ಮ ಸ್ವಂತ ಉಕ್ತಿ ಉಂಟೇ ಉಂಟು...."

ನಾಗು ಸಂಗತಿಯನ್ನು ತಿಳಿದುಕೊಂಡುಬಿಟ್ಟನು. "ಇವಳು ಗುರುತಿಡುವಾತ ಯಾರಿದ್ದಾನು? ಕೇಳಿದರೆ ಅಷ್ಟು ಸುಲಭದಲ್ಲಿ ಹೇಳಿ ಯಾಳೆ? ಸುಲಭದಲ್ಲಿ ಹೇಳುವವಳಾದರೆ ಇಷ್ಟೆಲ್ಲ ಉಪಾಯವೇಕೆ? ಕಲ್ಯಾಣಿ ಕಡೆಯುವರೆಗೂ ತನ್ನ ಗಂಡನು ಕಳ್ಳನೆಂಬುದನ್ನು ತೋರಿಸಿ ಕೊಡದೆ, ಎಂಥ ಸಾಹಸಮಾಡಿ ನಗವನ್ನು ವಿಕ್ರಯಿಸಿ ಹಣ ಕಳಿಸಿದಳು? ಹೆಂಗಸರ ನಡತೆಯೇ ಪ್ರತ್ಯೇಕ. ಅಬಲೆ–ಕೋಮಲೆ ಎಂದೆಲ್ಲ ಹೇಳು ತ್ತಾರೆಯೇ ಹೊರತು, ನಿಜವಾಗಿಯೂ ಹೆಂಗುಸರಿಗೇ ಕಲ್ಲೆದೆ. ನನ್ನ ಯೋಚನೆಯನ್ನು ಅಪ್ಪನೊಡನೆ ಹೇಳುತ್ತೇನೆ. ಇವಳ ಗುಟ್ಟು ತಿಳಿದುದಾಗಿ ತೋರಿಸಲೇಬಾರದು" ಎಂದು ನಿಶ್ಚಯಿಸಿಕೊಂಡು ಅಡಿಮೇಲಡಿಯಿಟ್ಟು ಮಹಡಿಮೇಲೇರಿದನು.

* * *

"ಅಣ್ಣಾ! ನೀನೂ ಅಪ್ಪನೂ ಯಾವ ವಿಷಯವನ್ನು ಕುರಿತು ತರ್ಕ ಮಾಡುತ್ತಿದ್ದಿರಿ?" ಎಂದು ಕೇಳಿದಳು ಶ್ಯಾಮಳೆ.

"ಅದರಿಂದ ನಿನಗೇನಿಲ್ಲ ಬಿಡು. ಅಮ್ಮಾ–ಅಜ್ಜೀ ಬಂದಾರು. ಮತ್ತೆ ಹೇಳುತ್ತೇನೆ" ಎಂದನು ನಾಗರಾಜ.

"ಅಮ್ಮ ಬಂದರೇನು? ಅಪ್ಪನಿಗೆ ಗೊತ್ತಾಗಬಹುದಂತೆ, ಅಮ್ಮ ನಿಗೆ ಗೊತ್ತಾಗಬಾರದೊ? ಅಂಥಾ ಪರಮರಹಸ್ಯವೇನಣ್ಣಾ? ಹೇಳೋ?"

ಇದೇ ಸಮಯವೆಂದು ಕೃಷ್ಣನು ಅವಳ ತಲೆಯಲ್ಲಿದ್ದ ಹೂಗಳನ್ನೆಲ್ಲಾ ಕಿತ್ತು ಮನೆ ಪೂರಾ ಚೆಲ್ಲಲಾರಂಭಿಸಿದ. ನಾಗುವೆಂದ:— "ಪಾಳೆಯಂ ಗೋಟೆಯಲ್ಲಿ ನನ್ನೊಂದಿಗೆ ಸೀನು, ಪೂರಾ ಎಂತ ಇಬ್ಬರಿದ್ದರು; ಅವರಲ್ಲಿ ಪೂರಾ ವೈಷ್ಣವ. ಸೀನು ಶೈವ. ಅವನಿಗೆ ಒಬ್ಬಳೇ ತಂಗಿ. ಹಣವಿಲ್ಲದ ಕಾರಣದಿಂದ ಮೂರು ವರ್ಷವಾಗಿ ಅವಳ ಮದುವೆಗೆ ತಡೆಯುಂಟಾಗಿದೆ ಯಂತೆ. ಯಾವುದಾದರೂ ವರದಕ್ಷಿಣೆಯಿಲ್ಲದ ವರವನ್ನು ಹುಡುಕಿ ಕೊಡುವುದೆಂದೂ, ತಾನೂ ವರದಕ್ಷಿಣೆ ಇಲ್ಲದೆಯೇ ಮದುವೆ ಮಾಡಿ ಕೊಳ್ಳುವುದೆಂದೂ ಶಪಥ ಮಾಡಿಕೊಂಡಿದ್ದಾನಂತೆ. ಅವನ ತಂಗಿ ಪರಮ ಸುಂದರಿಯಂತೆ. ಸ್ಕೂಲ ಫೈನಲದವರೆಗೆ ಓದಿದ್ದಾಳಂತೆ; ಪಿಟೀಲು ಅತ್ಯದ್ಭುತವಾಗಿ ಬಾರಿಸುತ್ತಾಳಂತೆ...." ಎಂದು ಆರಂಭಿಸಿದನು.

"ಯಾಕಾಗಿ ಇಷ್ಟು ದೊಡ್ಡ ಪೀಠಿಕೆ? 'ಅವಳನ್ನು ನಾನು ಮದುವೆ ಮಾಡಿಕೊಳ್ಳುತ್ತೇನೆ' ಎಂದು ಒಂದೇ ಮಾತಿನಲ್ಲಿ ಹೇಳಬಾರದೆ?"

"ಎಲೆ ಅಧಿಕ ಪ್ರಸಂಗಿ! ಹೇಳುವುದರೊಳಗೆ ಈ ಕುಯುಕ್ತಿಗಳನ್ನೆಲ್ಲ ಯಾರೇ ಕೇಳಿದ್ದು? ಹಾಗಾದರೆ ಹೇಳುವುದಿಲ್ಲ ಹೋಗು."

"ಇಲ್ಲಣ್ಣಾ. ಇನ್ನು ನಡುವೇ ಮಾತಾಡೆ! ಉಳಿದದ್ದು ಹೇಳೊ. ಅವಳ ಹೆಸರೇನು?"

"ಅವಳ ಹೆಸರು ಶಂಬಗವಂತೆ. ತಂದೆ ಇಷ್ಟಪಟ್ಟರೆ, ನಾನು ಅವಳನ್ನು ವರದಕ್ಷಿಣೆ ಇಲ್ಲದೆ, ಮದುವೆ ಮಾಡಿಕೊಳ್ಳುವುದಾದರೆ, ಅವನು ನಿನ್ನನ್ನು ಮದುವೆ ಮಾಡಿಕೊಳ್ಳುತ್ತಾನೆ. ತಡೆಯೇ ಇಲ್ಲ. ಒಳ್ಳೇ ಯೋಗ್ಯವಾದ ಹುಡುಗ; ಮರ್ಯಾದೆಯಾದ ಕುಟುಂಬ. ಹುಡುಗನನ್ನು ಸುಮ್ಮನೇ ನೋಡಿಕೊಂಡಿದ್ದರೇ ಸಾಕು. ನಗು ನಗುತ್ತ ಅವನು ಮಾತಾಡುತ್ತಿರುವುದನ್ನು ಕೇಳುತ್ತಿದ್ದರೇ ಸಾಕು, ಹೊತ್ತು ಹೋಗಿಬಿಡುತ್ತೆ."

"ಆದರೆ ಅನ್ನ–ಆಹಾರಾದಿಗಳು ಬೇಡ" ಎಂದು ತುಂಟನಗೆಯನ್ನು ನಕ್ಕಳು ಶ್ಯಾಮಲೆ.

"ಇದೇ ಬೇಡಾ ಅಂದೆ. ಮತ್ತೆ ಆರಂಭಿಸಿದಿಯಾ?"

"ಇಲ್ಲಣ್ಣಾ! ಇನ್ನುಮೇಲಿಲ್ಲ."

"ಅಪ್ಪನ ಆಲೋಚನೆ ಬೇರೆ. ಅದನ್ನು ಬಹಿರಂಗವಾಗಿ ಹೇಗೆ ಹೇಳುವುದೆಂದು, ಇಾಯಮಯವೆಂದು ಜಂಕುತ್ತಾ, ನಾನು ಈ ಕತೆಯನ್ನು ಆರಂಭಿಸಿದೆ."

"ಅಪ್ಪ ಏನು ಹೇಳುತ್ತಾರೆ?"

"ವರದಕ್ಷಿಣೆ ನನ್ನ ಮದುವೆಗೆ ಎರಡು ಸಾವಿರ ತೆಗೆದುಕೊಂಡರೆ, ಆದರಿಂದ ನಿನ್ನ ಮದುವೆಯನ್ನು ನಡೆಸಿಬಿಡಬಹುದು, ಅಂತ—" ಎಂದು ಹೇಳುತ್ತಿರಲು, ದೇವಾಲಯಕ್ಕೆ ಹೋದವರು ಬರುವ ಸದ್ದನ್ನು ಕೇಳಿ ಅವರ ಮಾತು ಅಲ್ಲಿಗೇ ನಿಂತಿತು.

# “ ಹೌದು, ಅವರೆ ! ”

“ ಅಮ್ಮ, ರಂಗ ನಾಳೆ ಬರುತ್ತಾನಂತೆ. ಅವನೊಂದಿಗೆ, ಅವನು ಯಾತ್ರೆಗೆ ಕರೆದುಕೊಂಡುಹೋದ ಇಬ್ಬರು ಕೂಡ ಬರುತ್ತಾರಂತೆ. ಕಳೆದ ವಾರ ನಾಗು ಅವನಿಗೆ ಬರೆದ ಕಾಗದದಲ್ಲಿ, ಅವರು ನಮ್ಮಲ್ಲಿಯೇ ಬಂದಿಳಿಯಬಲ್ಲವರಾಗಿದ್ದರೆ, ನೆಟ್ಟಗೆ ಇಲ್ಲಿಗೇ ಬಂದು ಕೊಂಚ ಶ್ರಮ ಪರಿಹಾರ ಮಾಡಿಕೊಂಡು ಹೋಗಬಹುದೆಂದು ಬರೆದಿದ್ದ. ಹಾಗೆಯೇ ಬಂದುಬಿಡುವುದಾಗಿ ಬರೆದಿದ್ದಾನೆ. . . . ಅಮ್ಮಾ ಶ್ಯಾಮಳಾ ! ಏನಾದರೂ ಕೊಂಡುಕೊಳ್ಳಬೇಕಾದ್ದು ಉಂಟಾ ? ಇದ್ದರೆ ಹೇಳು. ಸುಂದರಿಯೂ ಅಮ್ಮನೂ ಸುಖಜೀವಿಗಳು. ನೀನೇ ಉಪಚಾರ ಮಾಡಬೇಕು. ಚೆನ್ನಾಗಿ ಚೊಕ್ಕಟವಾಗಿ ಎಲ್ಲಾ ಕೆಲಸಗಳನ್ನೂ ಮಾಡಿಡು. ಆಗ ತಾನೇ ಯಾವ ಬ್ರಹ್ಮಚಾರಿಗಾದರೂ ಶಿಫಾರಸು ಮಾಡಿಯಾರು ” ಎಂದು ನಗುವನ್ನಿಷ್ಟು ಬೆರೆಸಿಕೊಂಡು ಮಾತಾಡಿದರು ಪತಂಜಲಿ ಶಾಸ್ತ್ರಿಗಳು.

“ ಹೋಗಿ ಅಪ್ಪಾ. ಯಾವಾಗಲೂ ನಿಮಗೆ ಪರಿಹಾಸವೆ ! ಅವರು ಯಾರಿಗೂ ಶಿಫಾರಸು ಮಾಡುವುದು ಬೇಡ ” ಎಂದು ಹೇಳಿ ತಲೆತಗ್ಗಿಸಿ ಕೊಂಡು ಒಳಗೆ ಹೋಗಿಬಿಟ್ಟಳು ಶ್ಯಾಮಳೆ. ಅವಳು ನೆನೆಯುವ ಮೊದಲೇ ಬಂದು ನಿಲ್ಲುವ ಆ ತರುಣನ ಆಕೃತಿ ಅವಳ ಒಳಗಣ್ಣಿನ ಮುಂದೆ ತೋರಿತು.

“ ಛೀ, ಇದೇನು ಸಂಕಟ ! ಎಷ್ಟುಬಾರಿ ಮರೆಯಬೇಕೆಂದು ಪ್ರಯತ್ನಪಟ್ಟರೂ ಆಗುವುದಿಲ್ಲವಲ್ಲ ! ರಂಗನೂ ನಾಳೆ ಬಂದುಬಿಡುತ್ತಾನೆ. ಹಗಲೆಲ್ಲಾ ಅವನೊಡನೆ ಮಾತಾಡಲಾಗಲಿಕ್ಕಿಲ್ಲ. ಬಂದ ಅತಿಥಿಗಳಿಗೆ ಉಪಚರಿಸಲಿಕ್ಕೂ, ಕೃಷ್ಣನ ಕೆಲಸ ಮಾಡಲಿಕ್ಕೂ ಸರಿಯಾಗಿಹೋಗುತ್ತೆ. ರಾತ್ರಿ ಒಬ್ಬನೇ ಇರುವಾಗಲೇ ಕೇಳಬೇಕು ” ಎಂದು ಎಣಿಸಿಕೊಂಡಳು.

ಬೆಳಗ್ಗೆ ಎಂಟು ಗಂಟೆ. ಹೊತ್ತು ಹರಿಯುವುದರೊಳಗೇ ಎದ್ದು ತಲೆ ಬಾಚಿಕೊಂಡು, ಅಂಗಳದಲ್ಲಿಯೂ, ತುಲಸಿ ಕಟ್ಟೆಯಲ್ಲಿಯೂ, ಪೂಜಾಸ್ಥಲ ದಲ್ಲಿಯೂ ಸುಂದರವಾಗಿ ರಂಗವಲ್ಲಿ ಹಾಕಿದ್ದಳು ಶ್ಯಾಮಳೆ. ಕಾಫಿಯ ಗಡಿಬಿಡಿ ಮುಗಿದು ಸ್ನಾನಕ್ಕೆ ಹೊರಡುವ ಹೊತ್ತು. ಅಜ್ಜಿ ಒಲೆ ಬಳಿಯಲ್ಲಿ

ಮಣೆಯ ಮೇಲೆ ಕುಳಿತುಕೊಂಡು "ಆದಿತ್ಯಹೃದಯ" ಹೇಳಿಕೊಂಡಿದ್ದರು. ಹೊರಗೆ ಹೋಗಿ ಹಿಂದಿರುಗಿಬಂದ ನಾಗರಾಜನು, ಯೋಚನೆ ಮಾಡುತ್ತ ಒರಗು ಕುರ್ಚಿಯಲ್ಲಿ ಕುಳಿತಿದ್ದ ಪತಂಜಲಿ ಶಾಸ್ತ್ರಿಗಳ ಬಳಿಗೆ ಬಂದು—"ಅಪ್ಪಾ, ಶ್ಯಾಮಳೆ ಮಹಾ ತುಂಟಿ. ನನ್ನನ್ನು 'ನ್ಯೆಯಾಂಡಿ' ಮಾಡುತ್ತಾಳೆ" ಎಂದನು.

"ನೈಯಾಂಡಿಯಾ? ಅದು ಯಾರೊ? 'ಶಿಂದೂರು ವೇಲಾಂಡಿ'ಯ ತಮ್ಮನೊ?" ಎಂದು ಕೇಳುತ್ತಾ ಶ್ಯಾಮಳೆ ಅಲ್ಲಿಗೇ ಬಂದಳು.

"ನೋಡಿದಿರಾ? ಮಾತಾಡಿದ್ದಕ್ಕೆಲ್ಲಾ ಗೇಲಿ ಮಾಡುತ್ತಾಳೆ. ನನ್ನ ಜತೆಯಲ್ಲಿದ್ದವರು ಮಧುರೆಯ ಕಡೆಯವರು. ಅವರ ಹಾಗೆಯೇ ನಾನು ಮಾತಾಡುತ್ತೇನಂತೆ. 'ಜೋಲೀ, ರಗಳೆ' ಇದೆಲ್ಲಾ ಎಂಥ ಭಾಷೇ ಅನ್ನುತ್ತಾಳೆ. ಹೋದ ವರುಷ ಮೂಕಿಯಾಗಿದ್ದಳು. ಈಗ ಇಷ್ಟು ಹರಟೆಮಲ್ಲಿಯಾಗಿದ್ದಾಳೆ" ಎಂದು ನಕ್ಕನು.

ಇಷ್ಟರಲ್ಲಿ ಅಂಗಳದ ಕಡೆ ಶಬ್ದವು ಕೇಳಲು, ಕೃಷ್ಣನನ್ನು ಎತ್ತಿಕೊಂಡು ಲಕ್ಷ್ಮಮ್ಮನೂ ಅವಳೊಂದಿಗೆ ರಂಗನೂ, ಮತ್ತಿಬ್ಬರು ಬರುವುದನ್ನು ಕಂಡು "ಅಮ್ಮ ಅವರು ಬರುವ ಹಾಗಿದೆ, ನೋಡು" ಎಂದೆಂದು, "ಬಾರೋಪ್ಪಾ, ರಂಗ. ಆರೋಗ್ಯವಾಗಿದ್ದೀಯಾ?" ಎಂದು ವಿಚಾರಿಸ ತೊಡಗಿದರು ಶಾಸ್ತ್ರಿಗಳು.

* * *

ಅಂದು ಸಂಜೆಯಲ್ಲಿ ಲಿಂಗಚೆಟ್ಟಿ ಬೀದಿಗೆ ಹೋಗಬೇಕೆಂದೂ, ಜಗದೀಶನು ಬಂದುಬಿಟ್ಟರೆ, ರಂಗನು ಬರಬೇಕಾಗಿಲ್ಲವೆಂದೂ ಕೆಲ್ಲಮ್ಮನೆಂದಳು. ಕೋಣೆಯಲ್ಲಿ ಅವಳೊಂದಿಗೆ ಲಕ್ಷ್ಮಮ್ಮ, ಸುಂದರಿ, ಶೇಷಜ್ಜಿ, ಗೌರಮ್ಮ ಇವರೆಲ್ಲ ಕುಳಿತಿದ್ದರು. ಮಧ್ಯದಲ್ಲಿ ಗೌರಮ್ಮ "ಎಲ್ಲಿ ಇನ್ನೊಬ್ಬಳು ಹುಡುಗಿ ಕಾಣುವುದಿಲ್ಲ? ಅವಳಿಗೇ ವರ ಹುಡುಕುತ್ತಿದ್ದೀರಂತ ಕಾಣುತ್ತೆ?" ಎಂದಳು.

"ಹೌದು. ಹ್ಯಾಗಿದ್ದರೂ ಈ ಜ್ಯೇಷ್ಠದೊಳಗೆ ನಡೆಯಬೇಕಂತ ಇದೆ. ವರ ಸರಿಯಾಗಿ ಕುದುರಲಿಲ್ಲ. ಹಣದ ಅಡಚಣೆಯೂ ಎಡೆಯಲ್ಲಿ ನಿಂತಿದೆ" ಎಂದು ಪೇರುಸಿರುಬಿಟ್ಟರು ಶೇಷಜ್ಜಿ

"ಒಳ್ಳೆ ಲಕ್ಷಣವಂತೆ. ಮಾಡಿಕೊಳ್ಳುವವ ಭಾಗ್ಯಶಾಲಿ. ಬುಗುರಿಯಂತೆ ಸುತ್ತಿ ಕೆಲಸಕಾರ್ಯ ಮಾಡುತ್ತಾಳೆ. ಓದಿದ್ದಾಳೋ? ಹಾಡು ಬರುತ್ತೆಯೆ?" ಎಂದು ಗೌರಮ್ಮ ಕೇಳಿದಳು.

"ಏಳನೆಯ ತರಗತಿವರೆಗೆ ಓದಿದ್ದಾಳೆ. ಸಾಕೂ ಅಂತ ಅಂದೆ. ಈ ಊರಿನಲ್ಲಿ ಎಲ್ಲರೂ ಕುದುರೆಗಳ ಹಾಗೆ ಶಾಲೆಗೆ ಹಿಂಡುಗಟ್ಟಿಕೊಂಡು ಹೋಗುತ್ತಾರೆ. ನಾನು ಹಳೇಕಾಲದ ಹುಚ್ಚಿ. ನನಗೆ ಈ ಹರಾಮಿಗಳೆಲ್ಲಾ ಕೂಡಿ, ಚೆಂಡಾಡಹೋಗುವುದೂ, ಮೀಟಿಂಗು ಮಾಡೋದೂ ಆಗೋದಿಲ್ಲ. ಮದುವೆಯಾದಮೇಲೆ, ಮತ್ತೆ ಗಂಡ ಹೋಗಬೇಕು ಅಂದರೆ ಕಳಿಸುವುದು ಅಂತ ಮಾಡಿ ಇನ್ನು ಸಾಕು ಅಂತ ಅಂದೆ. ನನ್ನ ಮಗ ಕೂಡಾ ಈವರೆಗೂ ನಾನಿಟ್ಟ ಗೆರೆ ದಾಟಿದ್ದಿಲ್ಲ. ಏನೋ ಕಷ್ಟಕಾಲ; ಮಗ ತುಂಬ ಶ್ರಮಪಡುತ್ತಾನೆ."

ಇಷ್ಟರೊಳಗೆ ಶೆಲ್ಲಮ್ಮ, "ಅವುಗಳನ್ನೆಲ್ಲಾ ನಿಮ್ಮ ಸಣ್ಣ ಮೊಮ್ಮಗ ಹೇಳಿದ್ದಾನೆ" ಎಂದಳು.

ಆಗ ಶ್ಯಾಮಳೆ ಅಡುಗೆಮನೆಯ ಕೆಲಸಗಳನ್ನು ಮುಗಿಸಿಕೊಂಡು, ಅಲ್ಲಿಗೆ ಬಂದಳು. "ಅಮ್ಮಾ ಶ್ಯಾಮಳೆ! ಇವರಿಗೆ ನಮಸ್ಕಾರ ಮಾಡೆ" ಎಂದರು ಅಜ್ಜಿ.

ಶ್ಯಾಮಳೆ ನಾಚಿಕೆಯಿಂದ ಮುಖ ಕೆಂಪೇರಲು, ಮಿಕ್ಕ ಸಂಕೋಚದಿಂದ ಹಂಸದ ಹಾಗೆ ನಡೆದು ಬಂದು, ಅವರಿಬ್ಬರಿಗೂ ಮಣಿದು, ನಂತರ ತನ್ನ ತಾಯಿಗೂ, ಅಜ್ಜಿಗೂ ಅಡ್ಡಬಿದ್ದು ಕಂಬದ ಬದಿಯೇ ನಿಂತಳು. "ಕೂತುಕೋಮ್ಮ" ಎಂದಳು ಗೌರಮ್ಮ.

ಅರೆಮರೆಯಾದಂತೆ ಕಂಬದ ಬದಿಯಲ್ಲೇ ಕುಳಿತಳು ಶ್ಯಾಮಳೆ. "ಏನೆ? ನಿನ್ನೆ ಓದಿದಿಯಲ್ಲ? ಅದರಲ್ಲಿ ಕೊಂಚ ತಾನೇ ಬಾಕಿ? ಈಗ ಓದುತ್ತಿಯಾ?" ಎಂದರು ಶೇಷಜ್ಜಿ.

"ಎಂಥ ಪುಸ್ತಕ?" ಎಂದು ಕೇಳಿದಳು ಗೌರಮ್ಮ.

"ಅದುವಾ? ಬಂಗಾಳಿಯಲ್ಲಿ ಬಹಳ ಗಟ್ಟಿಗರು. ಅವರ ಹೆಸರು ಬಂಕಿಂಚಂದ್ರ ಚಟರ್ಜೀ. ಅವರು ಬರೆದ ಕಥೆ. ಅದರ ಹೆಸರು 'ಆನಂದ ಮಠ'; ತುಂಬ ಚೆನ್ನಾಗಿದೆ. ಎಷ್ಟು ಬಾರಿ ಓದಿದರೂ ಬೇಸರಿಸದು. ಅವರ ಪುಸ್ತಕಗಳೆಂದರೆ ಇವಳಿಗೆ ಇಷ್ಟ" ಎಂದರು ಶೇಷಜ್ಜಿ.

ಆಗ ಗೌರಮ್ಮ:—“ಓದುವುದಿರಲಿ. ನಿಮ್ಮ ಪುಳ್ಳಿಗಳ ಹತ್ತಿರ ಸ್ವಲ್ಪ ಹಾಡಲಿಕ್ಕೆ ಹೇಳಿ, ಕೇಳುವ” ಎಂದಳು.

ಶ್ಯಾಮಳೆ ತಂಬೂರಿಯನ್ನು ಶ್ರುತಿಮಾಡಿಕೊಂಡು,—“ಎಂದು ಶಿವಕೃಪೆ ಬರುವುದೋ—” ಎಂಬ ದೇವರನಾಮವನ್ನು ಹಾಡಿದಳು. ಶೆಲ್ಲಮ್ಮ ಹಾಡನ್ನು ಕೇಳಿ ಪರವಶಳಾದಳು. “ಜಗದೀಶನಿಗೆ ಈ ಹಾಡೆಂದರೆ ತುಂಬ ಇಷ್ಟ” ಎಂದಳು.

“ಸುಂದರಿ! ತಂಬೂರಿಯನ್ನು ತಕ್ಕೊಂಡು, ಶ್ರುತಿಯನ್ನು ಕಮ್ಮಿ ಮಾಡಿ, ‘ಶಿವಶಿವಯನ—’ ಹಾಡೇ” ಎಂದರು ಅಜ್ಜಿ.

“ಶಿವಶಿವಯನರಾದಾ?”—ಎಂಬ ಕೀರ್ತನೆಯನ್ನು ಸುಂದರಿ ಹಾಡಿ ತೋರಿಸಿದಳು.

ಇದುವರೆಗೆ ಮಾತಾಡದಿದ್ದ ಕೃಷ್ಣ, ತಾನೂ ನಡುವೇ ಬಂದು ಕುಳಿತು, ತಾಳ ಹಾಕಲಾರಂಭಿಸಿ “ಶಾ—ಮಾ—” ಎಂದು ಕೂಗತೊಡಗಿದನು. “ಮನುಷ್ಯರ ದುಃಖಕ್ಕೆ ಮಗುವಿನ ಮುಖವೇ ಮದು” ಎಂದು ಶೆಲ್ಲಮ್ಮ ಅವನನ್ನು ಬಾಚಿ ಎತ್ತಿಕೊಂಡಳು. ಅವನೋ ಅಲ್ಲಿಂದ ಸಿಮಿರೆದ್ದುಕೊಂಡು, ಶ್ಯಾಮಳೆಯ ಮಡಿಲಮೇಲೆ ಹೋಗಿ ಕುಳಿತನು.

“ನಿಮಗೆಷ್ಟು ಮಕ್ಕಳೊ?” ಎಂದು ಶೆಲ್ಲಮ್ಮನನ್ನು ಕೇಳಿದಳು ಲಕ್ಷ್ಮೀರಮ್ಮ.

“ಒಬ್ಬನೇ ಒಬ್ಬ ಮಗ”

“ಮದುವೆಯಾಗಿದೆಯೆ?”

“ಇಲ್ಲ. ಇನ್ನುಮೇಲೆತಾನೇ ಆಗಬೇಕು”

“ನಿಮ್ಮ ಗೋತ್ರ ಯಾವುದೊ?”

“ನೈಧ್ರುವ ಕಾಶ್ಯಪ”

ಇಷ್ಟರಲ್ಲಿ ರಂಗನು ಬರೆದ ಪತ್ರವನ್ನು ಜ್ಞಾಪಿಸಿಕೊಂಡು, ತಾಯಿ ಏನಾದರೂ ಹರಟಬಿಟ್ಟಾಳೆಂದು ಸುಂದರಿ ಕಣ್ಣರಳಿಸಿ ತಾಯಿಯನ್ನು ನೋಡಿದಳು.

ಶೇಷಜ್ಜಿ—“ನಿಮ್ಮ ಮಗನಿಗೆ ಏನು ವರೋಪಚಾರ ಆಗಬೇಕೂಂತ ಮಾಡಿದ್ದೀರೊ?” ಎಂದರು.

" ವರದಕ್ಷಿಣೆಯೂ ಇಲ್ಲ, ಉಪಚಾರವೂ ಇಲ್ಲ. ಹುಡುಗಿ ಸರಿಯಾಗಿ ಕುದುರಿದರೆ, ಸಮಯೋಚಿತವಾಗಿ ನೋಡಿಕೊಳ್ಳುವುದು. ಹುಡುಗನಿಗೆ ಹುಡುಗಿ ಹಿಡಿಯಿತೆಂದರೆ, ನಾನೇನೂ ಹೇಳಹೋಗುವುದಿಲ್ಲ. ಇರುವುದೆಲ್ಲಾ ನನಗೆ ಅವನೊಬ್ಬನೆ. ತಂದರೂ ಅವಳಿಗೆ ಬಿಟ್ಟರೂ ಅವಳಿಗೆ ಇದ್ದದ್ದುಂಟೇ ಉಂಟು. ಆಶೆಯಿದ್ದಹಾಗೆ ಅವರೇ ಹುಡುಗಿಗೆ ಏನುಬೇಕಾದರೂ ಮಾಡಲಿ. ಆಶೆ ಪ್ರೀತಿ ಇಲ್ಲದವರಾದರೆ, ನಾವು ಕೇಳಿಬಿಟ್ಟರೆ ಮಾತ್ರ ಮಾಡಿಬಿಡುತ್ತಾರೆಯೊ? ತಪ್ಪು ಹೇಳಲಿಕ್ಕೂ ಮೋಸ ಮಾಡಲಿಕ್ಕೂ ಏನಾದರೂ ದಾರಿ ತೆಗೆಯುತ್ತಾರೆ" ಎಂದಳು ಶೆಲ್ಲಮ್ಮ.

" ಅಮ್ಮ! ನೀವು ವಯಸ್ಸಿನಲ್ಲಿ ಚಿಕ್ಕವರಾದರೂ ಅನುಭವವುಳ್ಳವರಾಗಿದ್ದೀರಿ. ನೀವು ಹೇಳುವುದು ನಿಜ. ನಿಮ್ಮ ಮಗ ಕಪ್ಪೋ ಬೆಳ್ಳಗೊ?" ಎಂದರು ಶೇಷಜ್ಜಿ.

" ಒಳ್ಳೆ ಬಿಳಿಗೆಂಪು. ಹೆಚ್ಚು ಕಡಮೆ ನನ್ನ ಹಾಗೇ ಇದ್ದಾನಂತ ಎಲ್ಲರೂ ಹೇಳುತ್ತಾರೆ: ಈಗ ಕೊಂಚ ಕಪ್ಪಾಗಿದ್ದಾನು. ಅಲೆದಾಟ, ಹೋಟಲೂಟ ಎಲ್ಲಾ ಸೇರಿತಷ್ಟೆ?" ಎಂದಳು.

ಇವರ ಮಾತು ಶ್ಯಾಮಳೆಗೆ ತುಂಬ ವೇದನೆಯನ್ನು ಹುಟ್ಟಿಸಿತ್ತು. " ಸರಿ, ನಂಬರ್ ನಾಲ್ಕು. ನಾಗಣ್ಣ ಹೇಳಿದ್ದೊಂದು; ರಂಗಣ್ಣ ಹುಡುಕಿದ್ದೊಂದು, ಅಜ್ಜಿ ಬಲೆ ಬೀಸಿ ಹಿಡಿಯುವುದು ಇನ್ನೊಂದು" ಎಂದು ನೆನೆಯುವಾಗ, ಮೊದಲು ತೋರಿದ ಆ ತರುಣನ ಮುಖವು ಅವಳನ್ನು ನೋಡಿ ನಗುವಂತೆ ತೋರಿತು. " ಅಯ್ಯಯ್ಯೊ! ಇವರೇನು ಮಾತಾಡುತ್ತಾರೆ? ಅಜ್ಜಿಯೂ ಈ ಅಮ್ಮಯ್ಯನವರೂ ಮಾತಾಡಿ ಮುಗಿಸಿ ಮುಹೂರ್ತ ಕೂಡ ಇಟ್ಟುಬಿಡುವ ಹಾಗಿದೆ! ಸ್ವೇಚ್ಛೆ—ಸ್ವತಂತ್ರ ಎಂದೆಲ್ಲಾ ಅಣ್ಣಂದಿರು ಬಾಯಿ ಬಡಕರಾಗಿ ಹೇಳಿಕೊಳ್ಳುವರೇ ಹೊರತು ಅನುಭವದಲ್ಲಿ ಏನೂ ಇಲ್ಲ. ಅವನು ಏನೋ ಏರ್ಪಾಡು ಮಾಡಿದ್ದೇನೇ ಅಂದ. ಇವನು ಏನೋ ಹೇಳುತ್ತಾನೆ. ಒಬ್ಬರಾದರೂ ನನ್ನನ್ನು ಗುಟ್ಟಾಗಿ ಕಂಡು ' ಈ ರೀತಿ ಸಂಗತಿ. ನಿನಗೆ ಸಮ್ಮತಿಯೇ? ಅವರನ್ನು ನೋಡುತ್ತೀಯಾ?' ಎಂದು ಕೇಳುವ ಸೂಚನೆಯೇ ಇಲ್ಲ. 'ವೈಶಾಖ ಹೋಯ್ತು. ಜ್ಯೇಷ್ಠ ಬಂತು' ಎಂದು ಮಾತೇ ಮುಂದೂಡುತ್ತಾರೆ. ಕಡೆಯವರೆಗೂ ನನ್ನನ್ನು

ಕೇಳುವ ಉದ್ದೇಶವೇ ಇಲ್ಲಾಂತ ಕಾಣುತ್ತದೆ" ಎಂದು ಯೋಚಿಸುತ್ತಿದ್ದಾಗ, ನಡುನಡುವೇ ಆ ತರುಣರೂಪವೇ ಅವಳ ಕಣ್ಣೊಳಗೆ ಸುಳಿಯುತ್ತಿತ್ತು.

ಗಂಟೆ ನಾಲ್ಕಾಯಿತು. "ನಾವು ಹೊರಡಬೇಕಲ್ಲ? ರಂಗನಾಥ ಎಲ್ಲಿ?" ಎಂದಳು ಶೆಲ್ಲಮ್ಮ.

"ಯಾವುದಕ್ಕೂ ಮನಸ್ಸಿನ ಹೊಂದಿಕೆಯಿದ್ದರೆ ಸಾಕು. ಜಾತಕವೂ ಬೇಡ; ಜೋತಿಷವೂ ಬೇಡ. ನಿಮ್ಮ ಮಗ ಬಂದು ನೋಡಿ, ಅವನ ಮನಸ್ಸಿಗೆ ಹಿಡಿದುಬಿಟ್ಟರೆ, ಮುಹೂರ್ತ ಇಟ್ಟುಬಿಡುವ" ಎಂದರು ಶೇಷಜ್ಜಿ.

"ಏನಜ್ಜಿ? ಏನು ಸಮಾಚಾರ?" ಎಂದು ಕೇಳುತ್ತಾ ರಂಗನು ಒಳಗೆ ಬಂದನು.

"ಇವರ ಮಗನಿಗೆ ನಮ್ಮ ಶ್ಯಾಮಳೆಯನ್ನು ಮಾಡಿಕೊಳ್ಳುತ್ತಾರೋ ಅಂತ ಕೇಳಿದೆ. ಇವರಿಗೆ ಇಷ್ಟವಾಗಿದೆ. ಅರ್ಧ ಮದುವೆ ಆದ ಹಾಗಾಯಿತು. ಹುಡುಗ ಬಂದು ಹುಡುಗೀನ ನೋಡಿ ಹಿಡಿದದೇ ಅಂದರೆ ತೀರಿತು" ಎಂದರು ಶೇಷಜ್ಜಿ.

"ಫೂ! ಇಷ್ಟೇ ತಾನೆ? ಶ್ಯಾಮಳಾ! ಇಲ್ಲಿ ಬಾರೆ! ನಾನು ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ ಗೊತ್ತಿದೆಯೊ? ವರನನ್ನು ಹಿಡಿಯಲಿಕ್ಕೇ. ಇವರು ನಮಗಿಂತ ಮೊದಲೇ 'ಸ್ವಯಂವರ' ನಡೆಸಿಕೊಂಡಿದ್ದಾರೆಂತ ಈಗ ತಾನೇ ಗೊತ್ತಾಯಿತು. ಸುಳ್ಳೋ ಸತ್ಯವೋ ಶ್ಯಾಮಳೆಯೇ ಹೇಳಲಿ! ಏನಮ್ಮಾ, ಮದುಮಗಳೇ! ಸುಂದರವಾದ ಸಂಜೆಯ ವೇಳೆಯಲ್ಲಿ, ಸುಂದರ ಸುಮನಿಚಯ ಸುರೋದ್ಯಾನದಲ್ಲಿ ನಾಯಕಿ ನಾಯಕನನ್ನು ಸಂಧಿಸುವಳಂತೆ! ಇಬ್ಬರೂ ಹೂಗಿಡಗಳ ಮರೆಯಾಗಿ ಒಬ್ಬರನ್ನೊಬ್ಬರು ನೋಡಿಕೊಂಡು ಮುಗುಳ್ನಗೆ ನಕ್ಕರಂತೆ! ಕಣ್ಣು ಕಣ್ಣುಗಳೊಂದುಗೂಡಿ ...." ಎನ್ನುವಾಗ "ಚೇ ಹೋಗೋ ಅಣ್ಣ! ಗೇಲೀ ಮಾಡಲಿಕ್ಕೇ ಕರೆದೀಯೇನೋ!" ಎಂದು ಶ್ಯಾಮಳೆ ಅಡುಗೆ ಮನೆಯ ಕಡೆಗೆ ಅಡಿದೆಗೆದಳು.

"ನೋಡಿದಿರಾ ಅತ್ತೇ! ನಿನ್ನೆ ಹುಟ್ಟಿದ ಚಿನ್ನಿ ನನ್ನ ಹತ್ತಿರ ಸುಳ್ಳುಹೇಳ್ತಾಳೆ! ಜಗದೀಶ ಬಂದಿದ್ದನಂತೆ! ಸುಮ್ಮನೇ ನೋಟಹಾಕಿ

ಹೋಗಲಿಕ್ಕೆ ಬಂದಾಂತ ಕಾಣುತ್ತೆ. ನಾನು ಕಳಿಸಿದ ಕಾಗದವನ್ನು ಶ್ಯಾಮಳೆಯ ಕೈಯಲ್ಲಿ ಕೊಟ್ಟುಬಿಟ್ಟು ಹೋದನಂತೆ! ಆಗಲೇ ಅವನಿಗೆ ಹಿಡಿದುಬಿಟ್ಟಿತಂತೆ. ಇವಳ ಸಂಗತಿ ಇನ್ನುಮೇಲಷ್ಟೇ ತಿಳಿಯಬೇಕು. ಏನೇ ಶ್ಯಾಮಳೆ! ನಾನು ಹೇಳುವುದು ಸರಿ ತಾನೆ?"

ಫಳಕ್ಕೆಂದು ಶ್ಯಾಮಳೆಯ ಮಿದುಳಲ್ಲಿ ಪ್ರಕಾಶ ಬಿದ್ದು, ಯಂತ್ರದಂತೆ ಕೆಲಸಕ್ಕೆ ಹತ್ತಿತ್ತು. ತನ್ನ ಮನಸ್ಸನ್ನು ಕಳವುಮಾಡಿದ ಕಳ್ಳ, ಶಿಲ್ಲಮ್ಮನ ಕುಮಾರನೆಂದು ಸ್ಪಷ್ಟನಾಗಿ ತಿಳಿಯಿತು. ಮಿತಿಮೀರಿದ ಸಂತೋಷದ ಹೆಚ್ಚಳದಿಂದ, ಅವಳ ಎದೆ ಹೊಡೆದುಕೊಂಡಿತು. ಮುಖದಲ್ಲೊಂದು ಅದ್ಭುತವಾದ ಸೌಂದರ್ಯರಾಗವು ಸುಳಿಯಿತು. ಎಳೆನಗೆಗಳು ತುಟಿಗಳ ಕೊನೆಯಲ್ಲಿ ನಲಿದುವು. ತಲೆ ತಟ್ಟನೆ ಬಾಗಿಕೊಂಡಿತು.

"ಹೂವು ಅರಳಿದಂತೆ ನಿನ್ನಾ ಸುಂದರ ಎಳೆನಗೆ...." ಎಂದು ರಂಗನಾಥ ಹಾಡತೊಡಗಿದನು.

ಶ್ಯಾಮಳೆ ಅಲ್ಲಿ ನಿಲ್ಲಲೇ ಇಲ್ಲ; ಒಂದೇ ಓಟ ಕಿತ್ತಳು.

## ' ವಸಂತ ವಿಹಾರ '

ಶಿಲ್ಲಮ್ಮ, ಲಕ್ಷ್ಮಮ್ಮ, ಗೌರಮ್ಮ, ಕೃಷ್ಣ, ನಾಗು, ಶ್ಯಾಮಳೆ ಇವರೆಲ್ಲರೂ ಜಗದೀಶನ ಬರುವಿಕೆಯನ್ನು ಇದಿರುನೋಡುತ್ತಾ ಜಗಲಿಯಲ್ಲಿ ಕುಳಿತುಕೊಂಡು ಹರಟೆ ಹೊಡೆಯುತ್ತಿದ್ದರು.

" ಏನತ್ತೇ? ಇಷ್ಟು ಕಷ್ಟಪಟ್ಟು ಹುಡುಕಾಡಿಯೂ ಅವರು ಸಿಕ್ಕಲಿಲ್ಲ ಹೆನ್ನುವಿರಲ್ಲ? ಅವರ ಫೋಟೋವನ್ನು ಪತ್ರಿಕೆಯಲ್ಲಿ ಹಾಕಿಸಿದಿರಾ?" ಎಂದು ನಾಗರಾಜನು ಕೇಳಿದನು.

" ಫೋಟೋವೇ ಇಲ್ಲ. ನಾನೊಬ್ಬಳೇ ಗುರುತು ಹಿಡಿಯುವವಳು.. ಏನು ಮಾಡುವುದು?" ಎಂದಳು ಶಿಲ್ಲಮ್ಮ.

" ಈ ಊರಿನಲ್ಲಿ ಪರಬ್ರಹ್ಮಸ್ವಾಮಿಗಳು ಅಂತ ಒಬ್ಬರು ಇದ್ದಾರೆ. ಅವರು ಯಾವಾಗಲೂ ಊರೂರು ಸುತ್ತುತ್ತಾರೆ. ಅವರನ್ನು ವಿಚಾರಿಸಿದರೆ ಒಂದು ವೇಳೆ ಗೊತ್ತಾಗುತ್ತದೋ ಏನೊ."

" ಅವರು ಯಾತ್ರೆಗೆ ಹೋಗಿ ಒಂದು ವರುಷಕ್ಕೆ ಕಮ್ಮಿ ಇಲ್ಲ, ಈಗ ಬಂದರೂ ಬಂದಾರು. ಕೃಷ್ಣನ ಹುಟ್ಟಿದ ಹಬ್ಬ ಆದ ಒಡನೆಯೇ ಹೋಗಿ ದ್ದಾರೆ" ಎಂದು ಶ್ಯಾಮಳೆ ಹೇಳುತ್ತಿರಲು, ಜಗದೀಶನು ಬಂದುಬಿಟ್ಟನು. ಎಲ್ಲರೂ ಎದ್ದು ಒಳಕ್ಕೆ ಹೋದರು.

* * *

ಅಂದು ಪೌರ್ಣಮಿ. ಮೇಲುಪ್ಪರಿಗೆಯಮೇಲೆ ಬೆಳುದಿಂಗಳಲ್ಲಿ ಕುಳಿತಿದ್ದನು ಜಗದೀಶ. ಅವನ ಬದಿಯಲ್ಲಿ ಶ್ಯಾಮಳೆ, ಕಾಲುಗಳನ್ನು ಇಳಿಬಿಟ್ಟುಕೊಂಡು, ಮಡಿಯಲ್ಲಿ ತಾಂಬೂಲದ ತಾಂಬಾಣವನ್ನಿಟ್ಟು ಕೊಂಡು ವೀಳ್ಯ ಹಾಕಿಕೊಂಡಿದ್ದಳು. ಅವನು ಕುಳಿತುಕೊಂಡಿದ್ದ ಒರಗು ಕುರ್ಚಿಯ ಬದಿಯಲ್ಲಿ ಒಂದು ಸ್ಟೂಲಿನ ಮೇಲೆ, ಒಂದು ಸ್ಫಟಿಕದ ಪಾತ್ರೆ ಯಲ್ಲಿ ಮಾವಿನ ಹಣ್ಣಿನ ತುಂಡುಗಳೂ ಬೆಳ್ಳಿ ತಂಬಿಗೆಯಲ್ಲಿ ಹಾಲೂ ಇಡಲ್ಪಟ್ಟಿದ್ದುವು. ಈಗ ಅವರು ವಿವಾಹ ಬಂಧನದಲ್ಲಿ ನವದಂಪತಿಗಳಾಗಿ ಬೆಳಗುತ್ತಿದ್ದರು.

ಬಿಸಿಲು ಕಾಲ. ಫಾಲ್ಗುಣ ಮಾಸ. ವಸಂತನು ಎಳೆವರಯದಿಂದ ಸುಳಿದಾಡಲಾರಂಭಿಸಿದ್ದನು. ಹೊಸದಾಗಿ ಚಿಗುರಿದ ಗಿಡಮರಗಳು, ಆ ಬೆಳುದಿಂಗಳಲ್ಲಿ ಮಿಂದು ಕಂಡವರ ಕಣ್ಮನಗಳನ್ನು ಸೂರೆಗೊಳ್ಳುತ್ತಿದ್ದುವು. ಮಂದಾನಿಲವು ಸುಗಂಧಕುಸುಮಗಳ ಸುವಾಸನೆಗಳನ್ನು ಹೊತ್ತುಕೊಂಡು ಬಂದು ಮನೆಮನೆಗಳಿಗೂ ಸೂರೆಮಾಡುತ್ತ ಹೋಗುತ್ತಿತ್ತು. ಅತಿ ನೀಳವಾಗಿ ಬೆಳೆದ ತೆಂಗುಗಳೂ, ಅದರ ಬದಿಯಲ್ಲಿದ್ದ ಇತರ ಓರಿಮರಗಳೂ ಆಕಾಶಲೋಕಕ್ಕೆ ಹೋಗುವ ಪಾವಟಿಗೆಗಳಂತೆ ಒಪ್ಪುತ್ತಿದ್ದುವು.

ತನ್ನನ್ನೆ ಮರೆತು ಆ ಬೆಳುದಿಂಗಳ ಚೆಲುವಿಕೆಯಲ್ಲಿಯೇ ಲಯಿಸಿ ಹೋಗಿದ್ದಳು ಶ್ಯಾಮಳೆ. ಎಂದಿಲ್ಲದ ಸೌಂದರ್ಯವು ಇಂದು ಅವಳಿಗೆ ಅದರಲ್ಲಿ ತೋರುತ್ತಿತ್ತು. ಮುಖದಲ್ಲಿ ಮುಗುಳ್ನಗು ಚೆಲ್ಲಾಟವಾಡುತ್ತಿತ್ತು. ಅವಳ ಕೆಲವು ಭೃಂಗಾಳಕಗಳು ಅವಳ ಚೆಲುಮೊಗದ ಮೇಲೆ, ಗಾಳಿಯೊಂದಿಗೆ ಆಟವಾಡುತ್ತ ಸಣ್ಣಲೆಗಳನ್ನು ಎಬ್ಬಿಸುತ್ತಿದ್ದುವು.

ಬಲುದೂರದಲ್ಲಿ, ಎಲ್ಲಿಂದಲೋ ಒಂದು ಮಧುರವಾದ ಸಂಗೀತವು ಕೇಳಬರತೊಡಗಿತು. ಭಿಕ್ಷುಕರು ತಾಳ ಹಾಕುವ ‘ ಗಿರಿಗಿಟ್ಟಿಕ ’ ಎಂಬ ಕಟ್ಟಿಗೆಯ ತಾಳಗಳ ಶಬ್ದವೂ, ದೂರದಿಂದ ಸಮೀಪಿಸಿಕೊಂಡು ಬರುತ್ತಿದ್ದುವು. ಸ್ವಲ್ಪಹೊತ್ತು ಶ್ಯಾಮಳೆ ದಿಗ್ಭ್ರಮಿಸಿದಳು. ಮೊದಲೊಂದು ದಿನ ಬೆಳುದಿಂಗಳಲ್ಲಿದ್ದಾಗ ಸ್ವಾಮಿಗಳು ಹಾಡಿದ್ದು ನೆನಪಿಗೆ ಬಂದು “ ಏನಿದು? ಪರಬ್ರಹ್ಮ ಸ್ವಾಮಿಗಳು ಎಂದು ಹೇಳಿದೆನಲ್ಲ? ಅವರು ಬಂದುಬಿಟ್ಟ ಹಾಗಿದೆ. ಒಂದು ವರುಷವಾಗಿ ಅವರು ಕಾಣಲೇ ಇಲ್ಲ. ಎಂಥ ಅದ್ಭುತವಾದ ಶಾರೀರ ಕೇಳಿದಿರಾ? ಅವರಿಗೆ ಗೊತ್ತಿಲ್ಲದ ಹಾಡೇ ಇಲ್ಲ. ಎಂಥಾ ಮಾತು! ಏನು ಮಧುರ! ಎಂಥ ಪ್ರೇಮಮಯವಾದ ನೋಟ! ಶಾಂತವೂ ಕರುಣೆಯೂ ಲಾಸ್ಯವಾಡುತ್ತಿರುವ ಮುಖ! ಮಹಾತ್ಮರೇ ಸರಿ. ಅವರ ವಯಸ್ಸೀಗ ಅರುವತ್ತಿದ್ದೀತು. ಅವರ ಮುಖ ನೋಡಿದರೇ ಪಾಪ ಹೋದೀತು. ಅಷ್ಟೊಂದು ಕಷ್ಟಕಾಲಗಳಲ್ಲಿ ಆ ಸ್ವಾಮಿಗಳ ಯೋಗ ಸಿಕ್ಕಿದ್ದು ನಮ್ಮ ದೊಡ್ಡ ಭಾಗ್ಯ. ಕೆಳಗೆ ಹೋಗೋಣವೆ? ಅತ್ತಿಗೆ ಕೂಡ ಅವರನ್ನು ನೋಡಬೇಕೂ ಅಂತ ಅಂದರು ” ಎಂದಳು ಶ್ಯಾಮಳೆ.

ಸ್ವಾಮಿಗಳ ಧ್ವನಿ ಬರುಬರುತ್ತ ಸಮೀಪವಾಯಿತು. "ಸರಿ-ಈ ಬೀದಿಯ ತುದಿಯಲ್ಲಿ ಅವರು ಬಂದಾಗ ನಾವು ಹೋಗುವ" ಎನ್ನುತ್ತಿರುವಾಗಲೇ,

**"ಈ ಜಗತ್ತಿನಲ್ಲಿರುವವರೆಲ್ಲಾ ಇದಿರಿಸಿ ನಿಂದರೆ ಏನಾಯ್ತು?**
**ಭಯವಿಲ್ಲಾ! ಭಯವಿಲ್ಲಾ! ಭಯವೆಂಬುದು ನಮಗಿನಿತಿಲ್ಲ"**

ಎಂಬ ಹಾಡು, ಅತಿ ಮಧುರವಾಗಿ ಅತಿ ಸಮೀಪದಲ್ಲಿ ಕೇಳಿತು. ಇಬ್ಬರೂ ಅವಸರವಸರವಾಗಿ ಇಳಿದು ಹೋದರು.

* * *

ಬೀದಿಯ ಜಗಲಿಯಲ್ಲಿ ಪತಂಜಲಿ ಶಾಸ್ತ್ರಿಗಳೂ, ಪಕ್ಕದ ಮನೆಯ ಅಗಸ್ತ್ಯಶರ್ಮ, ವಾಮನಶರ್ಮ ಎಂಬಿಬ್ಬರೂ ರಾಜಕಾರಣವನ್ನು ಕುರಿತು ತರ್ಕ ಮಾಡುತ್ತಿದ್ದರು.

ಸ್ವಾಮಿಯವರನ್ನು ಕಾಣುತ್ತಲೇ ಪತಂಜಲಿ ಶಾಸ್ತ್ರಿಗಳು, ಉತ್ತರೀಯವನ್ನು ನಡುವಿಗೆ ಸುತ್ತಿಕೊಂಡು ಸಾಷ್ಟಾಂಗ ನಮಸ್ಕಾರ ಹಾಕಿದರು. ಕಕ್ಷದಲ್ಲಿದ್ದ ದಂಡವನ್ನೂ 'ಗಿರಿಗಿಟ್ಟಿಕ'ವನ್ನೂ ಕೆಳಗಿಟ್ಟು "ಅದ್ಭುತ ಕಲ್ಪಕವೇ...." ಎಂದು ಸ್ವಾಮಿಗಳು ಕುಳಿತರು.

"ಅಮ್ಮಾ ಚಂಪಕಲಕ್ಷ್ಮೀ! ಶ್ಯಾಮಳಾ! ......" ಎಂದು ಕರೆದರು ಶಾಸ್ತ್ರಿಗಳು. ಇಷ್ಟರಲ್ಲಿ ಅರೆನಿದ್ರೆಯಲ್ಲಿದ್ದ ನಾಗರಾಜನೂ ಚಂಪಕಲಕ್ಷ್ಮಿಯೂ ಎದ್ದುಬಂದರು. ಆಗಲೇ ಎದ್ದುಬಂದಿದ್ದ ಶ್ಯಾಮಳೆಯೂ ಜಗದೀಶನೂ ಬೀದಿ ಬದಿಗೆ ಬಂದರು. "ಇವರಿಗೆ ನಮಸ್ಕಾರ ಮಾಡಿರಿ" ಎಂದರು ಶಾಸ್ತ್ರಿಗಳು.

ಶ್ಯಾಮಳೆಯೂ ಚಂಪಕೆಯೂ ಮೊದಲು ನಮಸ್ಕರಿಸಿದರು. ನಂತರ ನಾಗುವೂ ಜಗದೀಶನೂ ಅಭಿವಾದನೆಮಾಡಿ ಒಂದು ಬದಿಯಲ್ಲಿ ನಿಂತರು.

"ಯಾರು?" ಎಂದು ಕೈಸನ್ನೆಯಿಂದ ಕೇಳಿದರು ಸ್ವಾಮಿಗಳು.

"ಆ ಹುಡುಗಿ ನನ್ನ ಸೊಸೆ; ಇವನು ಶ್ಯಾಮಳೆಯ ಗಂಡ."

"ಆಹಾ! ಸಂತೋಷ! ಸಮಸ್ತ ಸನ್ಮಂಗಳಾನಿಭವಂತು. ಕಲ್ಪಕ ದೇವಿಯೇ ಸಹಾಯ. ವರನಿಗಾಗಿ ತುಂಬಾ ಶ್ರಮಪಟ್ಟಿರಿ. ತಾಯಿಯ

ಕಡೆಗಣ್ಣ ಕಟಾಕ್ಷವಿದ್ದರೆ, ಲೋಕದಲ್ಲಿ ಯಾವುದು ತಾನೆ ನಡೆಯದು? ಅಳಿಯ ಯಾರೊ? ಉದ್ಯೋಗದಲ್ಲಿದ್ದಾನೊ? ಓದುತ್ತಿದ್ದಾನೊ?"

"'ಚಂದ್ರಿಕಾ' ಎಂಬ ಪತ್ರಿಕೆ ಬರುತ್ತದಲ್ಲಾ, ಅದನ್ನು ಇವನೇ ಹಾಕಿಸುತ್ತಾನೆ."

"ಆಹಾ! ತುಂಬ ಸಂತೋಷ. ಆಹಾ! ಶ್ಯಾಮಳಾ! ಒಳ್ಳೆಯ ಸತ್ಪುತ್ರನೊಂದಿಗೇ ಸೇರಿಸಿದ್ದಾಳೆ ಈಶ್ವರಿ. ಕಲ್ಪಕಾಂಬೆಯನ್ನು ನಂಬಿದ ವರು ಕೈಬಿಡಲ್ಪಡುವರೆ!......ಆ ನಿಮ್ಮ ಕಾಂಗ್ರೆಸ್ ಹುಡುಗ ಇವನೇ ಅಲ್ಲವೊ?" ಎಂದು ನಾಗರಾಜನನ್ನು ತೋರಿಸಿದರು. "ಹೌದು" ಎಂದರು ಶಾಸ್ತ್ರಿಗಳು.

ಇಷ್ಟರಲ್ಲಿ ಕೃಷ್ಣನ ಅಳು ದನಿಯನ್ನು ಕೇಳಿ, ಚಂಪಕೆ ಒಳಗೆ ಹೋದಳು. ಶ್ಯಾಮಳೆ ಸ್ವಾಮಿಗಳನ್ನೇ ನೋಡುತ್ತ ಅಲ್ಲೆ ನಿಂತಳು.

"ಸೊಸೆ ಎಲ್ಲಿಯ ಹುಡುಗಿ? ತಂದೆ-ತಾಯಿ ಇದ್ದಾರೊ?"

"ಆಹಾ! ಎಲ್ಲರೂ ಇದ್ದಾರೆ" ಎಂದು ಹೇಳುತ್ತಿರಲು, "ಇಂದು ತಿರುವಾನ್ಮಿಯೂರಿನಲ್ಲಿ ನನ್ನಪ್ಪನ ನಾಟ್ಯ ಹೊತ್ತಾಯಿತು. ಏನೋ ಈ ದಾರಿಯಲ್ಲಿ ಬಂದೆ" ಎನ್ನುತ್ತಾ ಸ್ವಾಮಿಗಳು ದಂಡ, ತಾಳಗಳನ್ನು ಕೈಗೆತ್ತಿಕೊಂಡರು.

ಶ್ಯಾಮಳೆ ನಾಗರಾಜನ ಬಳಿಗೆ ಸಾರಿ, ಪಂಚಮಿ ರಾತ್ರಿಯಂದು, ಖಂಡಿತವಾಗಿ ಇವರನ್ನು ಬರಲಿಕ್ಕೆ ಹೇಳಬೇಕು, ಎನ್ನಲು, ನಾಗು ಅವರ ಬಳಿಗೆ ಬಂದು, "ತಮ್ಮನ್ನು ಈಗ ತಡಮಾಡಿಸುವುದು ನ್ಯಾಯವಲ್ಲ; ಪಂಚಮಿಯಂದು ರಾತ್ರಿ ಬಂದು ಖಂಡಿತವಾಗಿ ತಮ್ಮ ದರ್ಶನ ಕೊಡ ಬೇಕೆಂದು ಕೇಳಬಹುದಷ್ಟೆ?" ಎಂದನು.

"ಆಹಾ! ಅದಕ್ಕೇನು?" ಎಂದಂದು! "ಲೋಕ ನಾಯಕಿಯೇ ಅಂಬಾ...." ಎಂದು ಹಾಡುತ್ತ ಸ್ವಾಮಿಗಳು ಹೊರಟೇಬಿಟ್ಟರು.

ಅವರು ದೂರ ದೂರ ಹೋಗುವವರೆಗೆ, ಆ ಮನೋಹರವಾದ ಬೆಳುದಿಂಗಳ ವಾತಾವರಣದಲ್ಲಿ ಆ ದೇವಗಾನವು ಕೊಂಚ ಕೊಂಚ ವಾಗಿ ದೂರ ದೂರ ಸಾರುತ್ತ, ಕಡೆಗೆ ಗಾಳಿಯೊಂದಿಗೆ ಕಲೆತು ಹೋಯಿತು.

ಅದುವರೆಗೆ ಮೌನವಾಗಿದ್ದ ಅಗಸ್ತ್ಯಶರ್ಮಾ, "ಎಂಥ ನಡಿಗೆ! ಏನು ವೇಗ? ಐವತ್ತು ವಯಸ್ಸಿದ್ದೀತೆ?" ಎಂದರು. "ಮೊದಲೇ ಐವತ್ತು ಅಂದಿದ್ದರು. ಹಾಗಂದೇ ಈಗ ನಾಲ್ಕು ವರ್ಷವಾಯಿತು" ಎಂದನು ನಾಗರಾಜ.

"ಏನಪ್ಪಾ? ನೀವೆಲ್ಲರೂ ಭೂಲೋಕದಲ್ಲಿಯೇ ಇದ್ದೀರಾ? ಚೆನ್ನಾಗಿದೆ! ಏನೋ ಶ್ರಮಪಟ್ಟು ಮಲಗಿಬಿಟ್ಟೆ; ನಿದ್ದೆ ಬಂದುಬಿಟ್ಟಿತು. ಒಂದು ಸಾರಿ ಕರೆಯಬಾರದಿತ್ತೆ? ಸಂಬಂಧಿ ಅಮ್ಮ ಬಂದ ದಿನ ಮೊದಲುಗೊಂಡು 'ನೋಡಬೇಕು, ಅವರನ್ನು ಕೆಲವು ವಿಷಯ ಕೇಳಬೇಕು, ಅಂತ ಹೇಳುತ್ತಲೇ ಇದ್ದರು. ಏನೇ ಶ್ಯಾಮಳೆ, ನೀನಾದರೂ ಒಂದು ಮಾತು ಹೇಳಬಾರದಿತ್ತೆ?" ಎಂದು ಕೋಪದಿಂದ ಕೇಳಿದರು ಶೇಷಜ್ಜಿ.

ಶ್ಯಾಮಳೆ ಮಿಗೆ ದುಃಖದಿಂದ ತಲೆತಗ್ಗಿಸಿ, "ಇಲ್ಲಜ್ಜಿ. ನೀವು ಕೋಪಿಸುವುದು ನ್ಯಾಯವೇ. ಪಂಚಮಿ ದಿನ ರಾತ್ರಿ ಬರಲಿಕ್ಕೆ ಅಣ್ಣನ ಮೂಲಕವಾಗಿ ಹೇಳಿಸಿದ್ದೇನೆ. ಅವರನ್ನು ನೋಡಿದ ಕೂಡಲೆ ನಮಗೆ ಏನೂ ತೋರಲಿಲ್ಲ. ಸ್ವಲ್ಪ ಕುಳಿತರು. ತಿರುವಾನ್ಮಿಯೂರಿನ ನಾಟ್ಯಕ್ಕೆ ಹೋಗಬೇಕು ಅಂತ ಎದ್ದುಬಿಟ್ಟರು. ಹೇಗೂ ಅತ್ತೆಯವರು, ಇನ್ನೂ ನಾಲ್ಕು ದಿನ ಇದ್ದು ತಾನೇ ಹೋಗುತ್ತಾರೆ? ಅಷ್ಟರೊಳಗೆ ಇವರೂ ಬಂದು ಬಿಡುತ್ತಾರೆ. ಕೇಳಬೇಕಾದ್ದೆಲ್ಲ ಕೇಳಿದರಾಯಿತು. ಈಗ ನಮಗೆಲ್ಲರಿಗೂ ಒಂದು ದಾರಿ ತೋರಿಸಿದ ಕಲ್ಪಕಾಂಬೆ, ಅವರಿಗೂ ದಾರಿ ತೋರಿಸ ಲಾರಳೆ?" ಎಂದು ಹೇಳುತ್ತಿರುವಾಗ "ಅಜ್ಜಿಗೂ ಪುಳ್ಳೀಗೂ ಏನು ಯುದ್ಧ?" ಎಂದು ನಗುತ್ತಾ ಕೇಳಿಕೊಂಡು ಬಂದಳು ಶೆಲ್ಲಮ್ಮ.

"ಕೇಳು ಈ ಅತಿಶಯವನ್ನು! ನಿನ್ನೆ ರಾತ್ರಿ ಸ್ವಾಮಿಗಳು ಬಂದಿದ್ದರಂತೆ. ಶುಕ್ರವಾರ ಬರಲಿಕ್ಕೆ ಹೇಳಿದ್ದಾರಂತೆ. ಅವರಿಗೆ ಇಷ್ಟವಿದ್ದು ಬಂದರೆ ಉಂಟು. ಇಲ್ಲದಿದ್ದರೆ ನಾವು ಅವರನ್ನು ಕಂಡುಹಿಡಿಯಲಾಗುತ್ತದೆಯೆ? ಬಂದಿದ್ದಾರೆ ಅಂತ ಹೇಳಬಾರದೊ? ನಮಗೆ ಕೊಂಚ ನಿದ್ದೆ ಬಂದುಬಿಟ್ಟಿತು. ಇಲ್ಲದಿದ್ದರೆ ಅವರ ಹಾಡು ಬೀದಿ ಮೂಲೇಲಿ ಖಣೀಲ್ ಖಣೀಲೆಂದು ಕೇಳಿ ನಾವು ಸುಮ್ಮನಿದ್ದೇವೆಯೆ? ಒಳ್ಳೆ ಮಹಾನುಭಾವ.

ಅವರ ದರುಶನ ಸಿಕ್ಕುವುದೇನು ಸಾಮಾನ್ಯವೆ? ಏನೋ ಅವರ ಆಶೀರ್ವಾದ ದಿಂದಲೇ ಈ ಮಟ್ಟಿಗೆ ಬಂತು" ಎಂದರು ಶೇಷಜ್ಜಿ.

*　　　*　　　*

"ಅಮ್ಮ! ಅಜ್ಜೀ!" ಎಂದು ಆನಂದದಿಂದ ಗಟ್ಟಿಯಾಗಿ ಕೂಗಿದಳು ಶ್ಯಾಮಳೆ. "ಏನೇ ಏನು? ಅತ್ತೆ ಮಾವ ಎಲ್ಲರೂ ಇರುವಾಗ ಕೊಂಚ ಕೂಡ ಮರ್ಯಾದೆ ಇಲ್ಲದೆ ಕೂಗುತ್ತೀಯಾ?" ಎಂದು ಕಡುನುಡಿಯುತ್ತ ಕೋಣೆಗೆ ಬಂದರು ಶೇಷಜ್ಜಿ.

"ಅಜ್ಜೀ! ಕಲ್ಯಾಣಿ ಅಕ್ಕ ಬರುತ್ತಾಳೆ. ಅವಳೇ ಕಾಗದ ಬರೆದಿದ್ದಾಳೆ. ಮಗುವಿನ ಫೋಟೋ ಕೂಡಾ ಕಳಿಸಿದ್ದಾಳೆ" ಎಂದು ಸಂತೋಷವನ್ನು ತಾಳಲಾರದೆ ಕುಣಿ ಕುಣಿಯುತ್ತ ಶ್ಯಾಮಳೆಯೆಂದಳು.

"ಎಲ್ಲಿ? ಓದೇ! ಓದೇ!" ಎಂದು ಅವಸರಪಡಿಸಿದರು ಅಜ್ಜಿ.

ಜಗದೀಶನೂ ನಾಗುವೂ ಮಾಳಿಗೆಯಿಂದ ಇಳಿದುಬಂದರು. ನಾಗು ಶ್ಯಾಮಳೆಯನ್ನು ಸಮೀಪಿಸಿ, "ಎಲ್ಲಿ? ಇಲ್ಲಿ ತಾ" ಎಂದು ಕಾಗದವನ್ನು ಅವಳ ಕೈಯಿಂದ ಕಿತ್ತುಕೊಂಡು ಓದತೊಡಗಿದನು.

ಅವನ ಕಣ್ಣಿನಿಂದ ಕಣ್ಣೀರು ಧಾರೆಧಾರೆಯಾಗಿ ಕೆಳಗಿಳಿಯಿತು. ಓದಲಾರದೆ ಕಾಗದವನ್ನು ಜಗದೀಶನ ಕೈಗೆ ಕೊಟ್ಟುಬಿಟ್ಟನು. ಜಗದೀಶನು ಹೀಗೆಂದು ಓದಲಾರಂಭಿಸಿದನು.

ಸಾಲರ್‌ಜಂಗ್‌ಬಹದೂರ್ ರಸ್ತೆ
ಕೋಲಾಲಂಪುರ

ಪ್ರೀತಿಯ ಅಣ್ಣನಿಗೆ,

ಅನೇಕ ನಮಸ್ಕಾರಗಳು. ಉಭಯ ಕುಶಲೋಪರಿ. ನಾನು ನಿಮ್ಮೊಡನೆ ಹೇಳಿಕೊಳ್ಳದೆ ಬಂದುದರಿಂದ, ನಿಮಗೆಲ್ಲಾ ತುಂಬ ದುಃಖವನ್ನುಂಟುಮಾಡಿದ್ದೇನೆ. ಅದಕ್ಕಿಂತಲೂ ಹೆಚ್ಚಾಗಿ ನನ್ನ ಮನಸ್ಸು ಕಷ್ಟಪಟ್ಟಿತು. ಆದರೆ ಬೇರೆ ದಾರಿ ಇಲ್ಲದಿದ್ದುದರಿಂದ ನಾನು ಹಾಗೆ ಮಾಡಿದೆ.

ನನ್ನ ಪತಿ ನನಗೆ ಕಾಗದ ಬರೆದು, ಅದರಲ್ಲಿ ತಾವು ಮಾಡಿದ್ದೆಲ್ಲಾ ತಪ್ಪಾಯಿತೆಂದೂ, ಅಗ್ನಿಸಾಕ್ಷಿಯಾಗಿ ಮದುವೆ ಮಾಡಿಕೊಂಡು, ತನ್ನನ್ನೆ ನಂಬಿದ್ದ ಹೆಂಡತಿಯನ್ನು ಕೈ ಬಿಡುವುದು ಮಹಾ ಪಾಪವೆಂದು ಮರುಗುವೆನೆಂದೂ, ಯಾರೊಡನೆಯೂ ಹೇಳದೆ ತನ್ನೊಡನೆ ಬಂದುಬಿಟ್ಟರೆ, ಎಲ್ಲಿಯಾದರೂ ಹೋಗಿ ಬದುಕಿಕೊಳ್ಳಬಹುದೆಂದೂ ತಿಳಿಸಿದ್ದರು. ನಾನು ಯೋಚನೆಮಾಡಿ ನೋಡಿದೆ. ಸುಖವೋ ಕಷ್ಟವೋ ಅವರೊಂದಿಗಿರುವುದೇ ಹೆಚ್ಚಳವೆಂದು ನನಗೆ ತೋರಿತು. ಆದುದರಿಂದಲೇ ಹೊರಟುಬಿಟ್ಟೆ.

ನಾನು ಇಷ್ಟುಕಾಲದಿಂದಲೂ ಕಾಗದ ಬರೆಯದಿದ್ದದ್ದು ನೋಡಿ ನೀವೆಲ್ಲಾ ನನ್ನ ಮೇಲೆ ಸಿಟ್ಟಾದೀರಿ. ಆದರೂ ಕೆಲವು ಕಾರಣಗಳಿಂದಲೇ ನಾನು ಬರೆಯಲಿಲ್ಲ. ಅವುಗಳನ್ನು ಮುಖತಃ ಹೇಳಬೇಕಾಗಿವೆ. ಬೇಗದಲ್ಲಿಯೇ ನಾವು ಮದರಾಸಿಗೆ ಹೊರಟು ಬರಲಿಕ್ಕಿದ್ದೇವೆ. ಅವರು ಈಗ ರಾಂಡನ್ ಕಂಪೆನಿಯಲ್ಲಿ ಮ್ಯಾನೇಜರ್ ಪದವಿಯಲ್ಲಿ ಇದ್ದಾರೆ. ನನ್ನನ್ನು ತುಂಬ ಪ್ರೇಮದಿಂದಲೂ ಕ್ರಮದಿಂದಲೂ ನೋಡಿಕೊಳ್ಳುತ್ತಿದ್ದಾರೆ. ಹಳೆಯ ದುರ್ಗುಣಗಳೆಲ್ಲಾ ಹೋಗಿಯೇಬಿಟ್ಟವು. ಇಷ್ಟು ದಿನವಾಗಿ ಅಪ್ಪ, ಅಮ್ಮ, ಸುಂದರಿ, ರಂಗ, ಶ್ಯಾಮಳೆ ಇವರೆಲ್ಲರನ್ನು ಕುರಿತು ತಿಳಿದುಕೊಳ್ಳಬೇಕೆಂದು ಎಷ್ಟೋ ಆತುರವಿದ್ದೂ, ಕಾಗದ ಬರೆಯಬಾರದೆಂಪೇ ಬರೆಯಲಿಲ್ಲ. ನಾನು ಎಷ್ಟೋ ಕೇಳಿಕೊಂಡು ಮದರಾಸಿಗೆ ಬರಲು ಏರ್ಪಾಡು ಮಾಡಿದ್ದೇನೆ. 'ಈ ಕಾಗದವನ್ನು ಕೂಡ ಬರೆಯದೆ ದಿಡುಕ್ಕನೆ ಬಂದು ನಿಲ್ಲಬಹುದೇ?' ಎಂತಲೂ ಯೋಚಿಸಿದೆ. ಅಪ್ಪನಿಗೆ ಮುಂದಾಗಿ ತಿಳಿಸದೆ ಬಂದರೆ, ಬಂದ ಒಡನೆ ಬೇರೆ ಅಳಿಯಂದಿರ ಇದಿರಿನಲ್ಲಿ ಏನಾದರೂ ಮರ್ಯಾದೆಗೇಡು ನಡೆದರೆ ಏನುಮಾಡುವುದೆಂದು ಎಣಿಸಿಕೊಂಡು ಇದನ್ನು ಬರೆದಿದ್ದೇನೆ. ನೀನು ಜೈಲಿನಿಂದ ಬಿಡುಗಡೆಯಾಗಿ ಬಂದಿರುವುದಾಗಿಯೂ, ತಮ್ಮ ಹುಟ್ಟಿ ಮೂರು ವರ್ಷವಾಯಿತೆಂದೂ, ಶ್ಯಾಮಳೆಯನ್ನು ಒಳ್ಳೆಯ ಕಡೆಗೆ ಕೊಟ್ಟಿರುವುದೆಂದೂ, ನನಗೆ ಅತ್ತಿಗೆ ಬಂದಿದ್ದಾರೆಂದೂ ಕೇಳಿ ಸಂತೋಷಪಟ್ಟೆ

ದ್ದೇನೆ. ಇದನ್ನೆಲ್ಲಾ "ಚಂದ್ರಿಕಾ" ಪತ್ರಿಕೆಗೆ ಏಜಂಟಾಗಿ ಇಲ್ಲಿಗೆ ಬಂದವರು ಹೇಳಿದರು. ತಾಯಿಯೂ ಆರೋಗ್ಯಕ್ಕೆ ತಿರುಗಿದ್ದಾಳೆಂದೂ ತಿಳಿದಿದ್ದೇನೆ. ನೀನು ಸಮಯ ಸಂದರ್ಭ ನೋಡಿ ಅಮ್ಮನಿಗೂ, ಅಪ್ಪನಿಗೂ ಈ ಸಂಗತಿ ತಿಳಿಸು. ನಾನು ಆದಷ್ಟು ಬೇಗದಲ್ಲಿಯೇ ಬರುತ್ತೇನೆ. ಹೊರಡುವ ದಿನವನ್ನು ಮರುಟಪಾಲಿಗೆ ತಿಳಿಸುವೆನು. ಉಳಿದುದು ಮುಖತಃ.

ಇತಿ ನಿನ್ನ ಪ್ರೀತಿಯ ತಂಗಿ,

**ಕಲ್ಯಾಣಿ**

ಫೋಟೋ ಕಳುಸಿರುತ್ತೇನೆ. ಅದರಲ್ಲಿ ತುಂಟನಗೆ ನಗುತ್ತಿರುವುದು ನಿನ್ನ ಸೊಸೆ ವಸಂತಿ. ಅವಳಿಗೆ ಒಂದು ವರ್ಷವಾಗುತ್ತೆ.

**ಕಲ್ಯಾಣಿ**

"ಅಮ್ಮ! ನನ್ನ ಕಣ್ಮಣಿ! ಕಲ್ಯಾಣಿ! ನಿನ್ನನ್ನು ಮತ್ತೊಮ್ಮೆ ಹಡೆದೆನಮ್ಮ! ಕಲ್ಪಕಾಂಬಾ! ನನ್ನ ತಾಯೇ! ನನ್ನ ಹೊಟ್ಟೆಯಲ್ಲಿ ಹಾಲು ಎರೆದೆಯಮ್ಮ. ನಿನಗೆ ಕೊಡಕೊಡವಾಗಿ ಹಾಲು ಅಭಿಷೇಕ ಮಾಡಿಸುತ್ತೇನಮ್ಮಾ" ಎಂದು ಶೇಷಜ್ಜಿ ಆನಂದಬಾಷ್ಪವನ್ನು ಸುರಿಸಿದರು.

ನಾಗರಾಜನ ಮನಸ್ಸು ತಾಳಲಾರದ ಸಂತೋಷದಿಂದ ನಲಿಯಿತು. ಸುಂದರಿ–ಶ್ಯಾಮಳೆಯವರು ಆನಂದದಿಂದೇನೂ ತೋರದವರಾಗಿ ಹೇಳಿದ್ದೇ ಹೇಳುತ್ತಲಿದ್ದರು.

ಲಕ್ಷ್ಮಮ್ಮ ಏನೋ ಸರ್ವಸಾಧಾರಣವಾದೊಂದು ವಿಷಯವನ್ನು ಕೇಳಿದವಳಂತೆ ಒಳಗೆ ಹೋದಳು. ತಾಯಿಯ ಮನಸ್ಸಿನ ಸ್ಥಿತಿಯನ್ನು ಕುರಿತು ನಾಗರಾಜನಿಂದ ಒಂದೂ ನಿರ್ಣಯಿಸಲಾಗಲಿಲ್ಲ. ತಾನೂ ಅವಳ ಹಿಂದೆಯೇ ಒಳಗೆ ಹೋದನು.

ಧೊಪ್ಪೆಂದು ಕೆಳಗೆ ಕುಳಿತು ಬಿಕ್ಕಿಬಿಕ್ಕಿ ಅಳಲಾರಂಭಿಸಿಬಿಟ್ಟಳು ಲಕ್ಷ್ಮಮ್ಮ. ನಾಗು ಅವಳ ಬಳಿಯಲ್ಲಿ ಕುಳಿತು ಮೆಲ್ಲನೆ ಸಮಾಧಾನಪಡಿಸುವಾಗ, "ಏನಿದು? ಏನುಸಂಗತಿ? ಒಟ್ಟು ಗದ್ದಲಮಾಡುತ್ತಿದ್ದೀರಲ್ಲ?" ಎಂದು ಒಳಗೆ ಬಂದರು ಪತಂಜಲಿ ಶಾಸ್ತ್ರಿಗಳು.

# ಪಂಚಮಿ ರಾತ್ರಿ

ಇಂದೇ ಪಂಚಮಿ. ಮನೆಗೆಲಸಗಳೆಲ್ಲಾ ಮುಗಿದುವು. ರಾತ್ರಿ ಸ್ವಾಮಿಗಳಾಗಮನವನ್ನಿದಿರುನೋಡುತ್ತ ಎಲ್ಲರೂ ಅತ್ತಿತ್ತ ಎಡೆಯಾಡುತ್ತಿದ್ದರು. ಗಂಟೆಯೂ ಹತ್ತಾಯಿತು. ಲಕ್ಷ್ಮಮ್ಮ ಕೃಷ್ಣನನ್ನು ಮಡಿಲಲ್ಲೆತ್ತಿಕೊಂಡು ಉಯ್ಯಾಲೆಯಲ್ಲಿ ಕುಳಿತುಬಿಟ್ಟಳು. ಪತಂಜಲಿ ಶಾಸ್ತ್ರಿಗಳು ತಾಂಬೂಲವನ್ನು ಖಾಲಿ ಮಾಡುತ್ತ, ಬೀದಿ ಜಗಲಿಯಲ್ಲಿ ಕುಳಿತುಕೊಂಡು, ಕಲ್ಯಾಣಿಯೊಂದಿಗೆ ಅವಳ ಯೋಗಕ್ಷೇಮಗಳನ್ನು ವಿಚಾರಿಸಿಕೊಂಡಿದ್ದರು. ನಾಗು, ರಂಗ, ಜಗದೀಶ ಅಂಗಳದ ಬೆಳುದಿಂಗಳಲ್ಲಿ ಕುಳಿತಿದ್ದರು.

ಶಲ್ಲಮ್ಮನ ಮನಸ್ಸು ತಲ್ಲಣಿಸಿಕೊಂಡಿತ್ತು. "ಸ್ವಾಮಿಗಳು ಏನು ಹೇಳುವರೊ? ಅವರಿಲ್ಲ! ತೀರಿಹೋದರು ಎಂದೇನಾದರೂ ಹೇಳಿಬಿಟ್ಟಾರೊ? ಛೀ! ಇದೆಂಥ ಹುಚ್ಚಾಲೋಚನೆ! ಇದುವರೆಗೆ ಎಲ್ಲಾ ಶುಭಶಕುನಗಳೇ ತೋರಿವೆ. ಆದ್ದರಿಂದ ಹಾಗೆಲ್ಲ ಹೇಳರು. ಒಂದು ವೇಳೆ ಎಲ್ಲಿಯಾದರೂ ಸಂಸಾರ ಮಾಡಿಕೊಂಡಿದ್ದಾರೊ? ಏನೋ?" ಎಂದು ಯೋಚಿಸುತ್ತಾ ಕೋಣೆಯಲ್ಲಿ ಬಂದು ಕುಳಿತಳು. ಕಳೆದ ಕಾಲಗಳನ್ನೆಲ್ಲ ನೆನೆಯುತ್ತ ಮುತ್ತು ಮುತ್ತಾಗಿ ಕಣ್ಣೀರುಗರೆಯಲಾರಂಭಿಸಿದಳು.

ಗಂಟೆ ಹನ್ನೆರಡಾಯಿತು. "ಅಮ್ಮಾ ಶ್ಯಾಮಲಾ! ಸ್ವಾಮಿಗಳಿಗೆ ಉಪಾಹಾರ ತೆಗೆದಿಟ್ಟಿದ್ದಿಯಲ್ಲಾ? ಮುಚ್ಚಿಟ್ಟಿದ್ದೀಯಾ? ಇಲ್ಲದಿದ್ದರೆ ಮುಚ್ಚಿಡು. ಇನ್ನೆಲ್ಲಿ ಬರುತ್ತಾರೆ?" ಎಂದು ಹಾಸಿಗೆಯನ್ನು ಜಾಡಿಸಿ ಹಾಕಿಕೊಳ್ಳಲಾರಂಭಿಸಿದರು ಶಾಸ್ತ್ರಿಗಳು.

"ಈ ಗಡಿಯಾರ ಮುಂದಾಗಿ ಹೋಗುತ್ತದೆ. ಗಂಟೆ ಹನ್ನೆರಡಾಗಿರಲಿಕ್ಕಿಲ್ಲ. ಹನ್ನೊಂದೂವರೆ ಇದ್ದೀತು. ಖಂಡಿತ ಬರುತ್ತಾರೆ. ನೀವು ಮಲಗಿರಿ. ಆನೇ ಬರೋದು ಹಿಂದೆ, ಗಂಟೇ ಸ್ವರ ಕೇಳೋದು ಮುಂದೇ ಎಂಬ ಹಾಗೆ ಅವರ ಹಾಡು ಕಾಲುಗಂಟೆ ಮುಂದಾಗಿಯೇ ಕೇಳಬರುತ್ತಷ್ಟೆ? ಆಗ ಎದ್ದು ಬಾಗಿಲು ತೆರೆದರೆ ಸಾಕು. ರಂಗ ಹೊರಗಿನ ಜಗುಲಿಯಲ್ಲಿಯೇ ಮಲಗಿಕೊಳ್ಳುತ್ತಾನಂತೆ. ಹಾಗೆ ನಮಗೆ ನಿದ್ದೆ ಬಂದರೂ ಅವನು ಕರೆಯುತ್ತಾನೆ" ಎಂದಳು ಲಕ್ಷ್ಮಮ್ಮ.

ಶೇಷಜ್ಜಿ ಕಾಲನ್ನು ಬಿಡಿಸಿಕೊಂಡು ಕುಳಿತಂತೆಯೆ, ಕಂಬಕ್ಕೊರಗಿ ಗೊರಕೆ ಹೊಡೆಯುತ್ತಿದ್ದರು. ಅವರ ಕುಟುಂಬದಲ್ಲಿ ಎಷ್ಟೋ ಮಾರ್ಪಾಡುಗಳುಂಟಾದರೂ, ಶೇಷಜ್ಜಿಯು ಗೊರಕೆಗೆ ಕೊಂಚವೂ ಮಾರ್ಪಾಟಾಗಿರಲಿಲ್ಲ. ಶೆಲ್ಲಮ್ಮನೂ ಗೌರಮ್ಮನೂ ಹಾಸಿಗೆಯಲ್ಲಿ ಹೊರಳುತ್ತ ಚಿಂತಿಸುತ್ತಿದ್ದರು. ಊರೆಲ್ಲಾ ನಿಃಶಬ್ದವಾಯಿತು. ರಂಗ, ನಾಗು, ಜಗದೀಶ ಮೂವರು ಬೆಳುದಿಂಗಳಂಗಳದಲ್ಲಿಯೂ, ಶ್ಯಾಮಳೆಯೂ ಚಂಪಕೆಯೂ ಅದರ ಬದಿಯ ಜಗುಲಿಯಲ್ಲಿಯೂ ಕುಳಿತುಕೊಂಡು ಮಾತಾಡತೊಡಗಿದರು. ರಂಗ,—"ನಾನು ಹೋಗಿ ಮಲಗುತ್ತೇನೆ. ಹೀಗೆ ಕಣ್ಣುಬಿಟ್ಟುಕೊಂಡಿದ್ದರೆ ಬೆಳಗ್ಗೆ ಎಚ್ಚೆತ್ತಹಾಗೇ ಸರಿ" ಎಂದು ಎದ್ದನು.

* * *

"ಅವರೇ! ಹೌದು ಹೌದು! ಅದೋ ಗಿರಿಗಿಟ್ಟಕದ ಶಬ್ದ ಅದ್ಭುತವಾದ ಹಾಡಿನೊಂದಿಗೆ ಕಲೆತು ಗಾಳಿಯಲ್ಲಿ ತೇಲಿಕೊಂಡು ಬರುತ್ತಿದೆ, ಆಹಾ!...." ಎಂದನು ಜಗದೀಶ.

ಶ್ಯಾಮಳೆ ಆಗತಾನೇ ಕೊಂಚ ನಿದ್ರೆಹಿಡಿದು ಪ್ರೇಮಮಯವಾದ ಸ್ವಪ್ನ ಕಂಡುಕೊಂಡಿದ್ದಳು. ಅಂದೇ ಅರಳಿದ ಹೂವಿನಂತಿದ್ದ ಅವಳ ಕಪೋಲವನ್ನು ಮೆಲ್ಲನೆ ಮುಟ್ಟಿದನು ಜಗದೀಶ. ಶ್ಯಾಮಳೆ ಗಕ್ಕನೆ ಎದ್ದು ಕುಳಿತಳು.

"ಏನು? ನಿದ್ರಿಸಿಬಿಟ್ಟೆಯಾ?"

"ಇಲ್ಲ. ಕೊಂಚ ಜೊಂಪುಹತ್ತಿದಹಾಗೆ ಆಯ್ತು" ಎಂದಳು ಶ್ಯಾಮಳೆ.

"ಹರಿಶ್ಚಂದ್ರನನ್ನು ಸುಳ್ಳು ಹೇಳಬೇಕೂ ಅಂತ ಅಷ್ಟು ನಿರ್ಬಂಧಪಡಿಸಿದರಲ್ಲ ವಿಶ್ವಾಮಿತ್ರರು? ಈ ಸಣ್ಣ ಯುಕ್ತಿ ಅವರಿಗೆ ಕಾಣಲಿಲ್ಲ. ಎಂದಾದರೊಂದು ದಿವಸ ಹಗಲಲ್ಲಿ ಅವನು ಉಂಡಮೇಲೆ, ಮಾತಾಡುತ್ತಾ ಇರುವಾಗ, ಸ್ವಲ್ಪ ಕಣ್ಣುಮುಚ್ಚಿದ ಸಮಯ ನೋಡಿ, 'ಹರಿಶ್ಚಂದ್ರಾ, ನಿದ್ದೆ ಮಾಡಿಬಿಟ್ಟೆಯಾ?' ಎಂದು ಕೇಳಿದ್ದರೆ, 'ಇಲ್ಲಿಲ್ಲ. ಕಣ್ಣುಮುಚ್ಚಿದೆ ಅಷ್ಟೆ' ಅನ್ನುತ್ತಿದ್ದ" ಎಂದು ನಕ್ಕು, "ಅಕೋ ಸ್ವಾಮಿಗಳ ಕೊರಳು

ಕೇಳುತ್ತದೆ. ಎದ್ದು ಬಾ. ನಾನು ಹೋಗಿ ಅಮ್ಮನನ್ನು ಎಬ್ಬಿಸುತ್ತೇನೆ" ಎಂದು ವೇಗವಾಗಿ ಕೆಳಗಿಳಿದನು ಜಗದೀಶ.

ಹಾಡಿಕೊಂಡು ಮೈಮರೆತು, ಹುಚ್ಚರಂತೆ ಕುಣಿಯುತ್ತ ಬರುತ್ತಿದ್ದರು ಸ್ವಾಮಿಗಳು. ಕ್ರಮದಂತೆ 'ವಸಂತ ವಿಹಾರದ' ಬಳಿಗೆ ಬರುತ್ತಲೇ ಹಾಡು ಮುಗಿಯಿತು.

ಜಗುಲಿಯ ಬಳಿಗೆ ಬರುತ್ತಲೇ, ದಂಡವನ್ನು ಧಡಲ್ಲನೆ ಕೆಳಗೆ ಹಾಕಿ, "ಅದ್ಭುತಕಲ್ಪಕವೇ......" ಎಂದು ಸ್ವಾಮಿಗಳು ಕುಳಿತರು.

ಮೊದಲೇ ಸಿದ್ಧನಾಗಿ ಕಾದಿದ್ದ ರಂಗನು ಅವರಿಗೆ ಕೈಮುಗಿದನು. ಮರುನಿಮಿಷವೇ ಬಾಗಿಲು ತೆರೆಯಲ್ಪಟ್ಟಿತು. ಶ್ಯಾಮಳೆ, ಚಂಪಕೆ, ನಾಗು, ಜಗದೀಶ, ಶೆಲ್ಲಮ್ಮ, ಗೌರಮ್ಮ, ಶೇಷಜ್ಜಿ ಮೊದಲಾದವರೆಲ್ಲರೂ ಒಬ್ಬರ ಹಿಂದೊಬ್ಬರಾಗಿ ನಾಟಕರಂಗದಲ್ಲಿ ಪಾತ್ರಗಳು ಪ್ರವೇಶಿಸುವಂತೆ ಹೊರಗೆ ಬಂದರು.

"ಅಮ್ಮಾ, ಶ್ಯಾಮಳಾ! ದೇವರ ಕೋಣೆಯಿಂದ ಹೂವನ್ನೆತ್ತಿ ಕೊಂಡು, ಅಕ್ಕನನ್ನೂ ಕರೆದುಕೊಂಡು ಬಾ. ಅವಳು ಮೊದಲು ನಮಸ್ಕಾರ ಮಾಡಲಿ. ನಂತರ ನೀನೂ, ಚಂಪಕೆಯೂ...." ಎಂದರು ಪತಂಜಲಿ ಶಾಸ್ತ್ರಿಗಳು.

ಶ್ಯಾಮಳೆ ಒಳಗೆ ಹೋಗಿ ಕೈಯಲ್ಲಿ ಬೆಳ್ಳಿತಟ್ಟೆಯೊಂದಿಗೆ ಸುಂದರಿ ಯನ್ನೊಡಗೂಡಿ ಬಂದಳು. ಅರೆನಿದ್ದೆಯಲ್ಲಿದ್ದ ಸುಂದರಿ ಸ್ವಾಮಿಗಳಿಗೆ ವಂದಿಸಿ ನಿಂತಳು. "ದೀರ್ಘ ಸುಮಂಗಲೀಭವ" ಎಂದಂದು, "ಈ ಮಗುವಿನ ಗಂಡ ಏನುಮಾಡುತ್ತಾನೆ?" ಎಂದು ಕೇಳಿದರು.

"ಉತ್ತರದಲ್ಲಿ ಸಿಮ್ಲಾದಲ್ಲಿ ಏನೋ ಕೆಲಸ ಸಿಕ್ಕುತ್ತೇ ಅಂತ ಹೋದ. ಅದೊಂದೂ ಸರಿಯಾಗಿಲ್ಲ. ಈಗ ಕಲ್ಕತ್ತದಲ್ಲಿ ಟ್ರಾಂಬಂಡಿಗಳು, ದೀಪದ ಕಂಬಗಳು ಇವುಗಳ ಮೇಲೆ ವರುಷಗಣನೆಯಲ್ಲಿ ನಿಲ್ಲತಕ್ಕಂತಹ ಪ್ರಕಟನೆಗಳಂತೆ; ಅವುಗಳನ್ನು ಒಂದು ಲಕ್ಷ ರೂಪಾಯಿಗೆ ಆರ್ಡರ್ ತೆಗೆದುಕೊಂಡಿರುವನಂತೆ. ನಮಗೇನೋ ಲಕ್ಷ, ಹತ್ತುಸಾವಿರ ಎಂಬ ಮಾತು ಕೇಳಿದರೇನೇ ಭಯವಾಗುತ್ತದೆ. ಅವರೇನಂದರೆ ನೀರಿನಹಾಗೆ ಆ ಶಿಕ್ಕ ಕರ್ಚುಮಾಡುತ್ತಾರೆ" ಎಂದರು ಶಾಸ್ತ್ರಿಗಳು.

"ಅವನ ತಂದೆ ಸೌಖ್ಯವಾಗಿದ್ದಾರಷ್ಟೇ? ಏನೂ ಚಿಂತೆಯಿಲ್ಲ. ವೇಲಾಯುಧನೇ ಹುಟ್ಟುತ್ತಾನೆ. ಅವನ ಹೆಸರೇ ಇಡು. ಕೃಷ್ಣ ಎಲ್ಲಿ ನಿದ್ರಿಸಿಬಿಟ್ಟನೊ?" ಎಂದು ಕೇಳುತ್ತಾ ಸ್ವಾಮಿಗಳು ತಟ್ಟೆಯಲ್ಲಿದ್ದ ಹಣ್ಣು ಗಳನ್ನು ತಿನ್ನಲಾರಂಭಿಸಿದರು. ಆಮೇಲೆ—"ಪಂಚಮಿಯಂದು ಯಾತ ಕ್ಕಾಗಿ ಬರಲಿಕ್ಕೆ ಹೇಳಿದ್ದು?"

ಶಾಸ್ತ್ರಿಗಳು ಮೆಲ್ಲನೆ—"ನಮ್ಮ ಸಂಬಂಧಿಕರು—ಜಗದೀಶನ ತಾಯಿಗೆ ತಮ್ಮ ಹತ್ತಿರ ಏನೋ ಕೇಳಬೇಕಂತೆ" ಎಂದರು.

"ಹುಂ ನನಗೇನು ಗೊತ್ತಿದೆ? ಸ್ವಾಮಿ ಸ್ವಾಮಿ ಎಂದು ನೀವೆಲ್ಲ ಹೇಳಿಬಿಟ್ಟಿರಿ. ಆದ್ದರಿಂದ ಆ ಅಮ್ಮಯ್ಯ ನನಗೆ ಜ್ಯೋತಿಷ್ಯವೋ ಮಾಂತ್ರೀ ಕವೋ ಗೊತ್ತಿರುವುದೆಂದು ನೆನೆದುಬಿಟ್ಟರೋ ಏನೋ. ನನಗೆ ಅದೊಂದೂ ಗೊತ್ತಿಲ್ಲವಲ್ಲ? ನನಗೆ ಗೊತ್ತಿದ್ದದ್ದು ಕೇಳಿದರೆ ಹೇಳಿಯೇನು. ತಾಯಿಾ ಕಲ್ಪಕಾಂಬೆಯನ್ನೂ ಅವಳ ಮಕ್ಕಳು ಮರಿಮಕ್ಕಳನ್ನೂ ಕುರಿತೇನಾದರೂ ಕೇಳಿದರೆ ಹೇಳಿಯೇನು?" ಎಂದರು.

"ಇಲ್ಲ. ಇದು ಬೇರೆ ವಿಷಯ. ಅವರ ಗಂಡ ಕಾಣೆಯಾಗಿಹೋಗಿರು ತ್ತಾರೆ. ನೀವು ಬಹಳ ಊರುಗಳನ್ನೆಲ್ಲ ಸುತ್ತಿಬಂದವರು. ಎಲ್ಲಿಯಾದರೂ ನೋಡಿರಬಹುದೋ ಎಂದು ಕೇಳಬೇಕಂತೆ. ಒಬ್ಬ ದ್ರೋಹಿ ಅಸೂಯೆ ಯಿಂದ ಇವರ ಮೇಲೆ ಅಪವಾದವನ್ನು ಕಲ್ಪಿಸಿ ಹೇಳಿ, ಅವರು ಇವರನ್ನು ಬಿಟ್ಟು ಓಡಿಹೋಗುವಂತೆ ಮಾಡಿದ. ಅವನು ಮರಣಕಾಲದಲ್ಲಿ ಬಾಯಿ ಬಿಟ್ಟು ತನ್ನ ದ್ರೋಹವನ್ನೆಲ್ಲ ಇವರೊಡನೆ ಹೇಳಿ, ಕ್ಷಮೆಯನ್ನು ಕೇಳಿ ಕೊಂಡನಂತೆ" ಎಂದಂದು, "ಶ್ಯಾಮಳಾ, ಅತ್ತೇನ ಬಂದು ನಮಸ್ಕಾರ ಮಾಡಂತ ಹೇಳು" ಎಂದರು.

ಆ ಮಾತು ಮುಗಿಯುವ ಮೊದಲೇ ಶೆಲ್ಲಮ್ಮ ಸ್ವಾಮಿಗಳ ಮುಂದೆ ಬಂದು ನಿಂತಳು. ಸ್ವಾಮಿಗಳು ಕಣ್ಣುಮುಚ್ಚಿ ಮೌನವಾಗಿದ್ದರು. ಎಳೆನರೆ ಯೊಂದಿಗೆ ಕೂಡಿದ ದಾಡಿಯೂ ಮುಖವೂ ಇದಕ್ಕೆ ಮೊದಲು ಎಲ್ಲಿಯೋ ಕಂಡಂತೆ ಅವಳಿಗೆ ತೋರಿತು. ಕೊರಳ ದನಿಯೂ ಪರಿಚಯದ ದನಿಯಂತೆ ತೋರಿತು.

ಸ್ವಾಮಿಗಳು ಕಣ್ಣು ತೆರೆಯದೆ, ಹಾಗೆಯೇ ಇದ್ದರು. "ಹೇಳಿ" ಎಂದು ಕೈಸನ್ನೆ ಮಾಡಿದರು ಪತಂಜಲಿ ಶಾಸ್ತ್ರಿಗಳು.

"ಮಧುರೆಗೆ ಸಮೀಪದಲ್ಲಿರುವ ದೇವಾರದಲ್ಲಿ......" ಎಂದು ಹೇಳತೊಡಗಿದಳು ಶೆಲ್ಲಮ್ಮ.

"ಶೆಲ್ಲಂ!" ಎಂದು ಮಿಗೆ ಆಶ್ಚರಿಯಿಂದಲೂ ಗಂಭೀರದಿಂದಲೂ ಸ್ವಾಮಿಗಳೆಂದರು.

"ಆ! ನೀವೇನಾ!" ಎಂದು ಕೂಗಿ, ಅಡಿಗಡಿದ ಮರದಂತೆ, ಅವರ ಕಾಲಿನ ಮೇಲೆ ಬಿದ್ದುಬಿಟ್ಟಳು ಶೆಲ್ಲಮ್ಮ.

ಜಗದೀಶನು "ಅಪ್ಪ!" ಎಂದು ಕೂಗಿ ಅವರ ಬಳಿಯಲ್ಲಿ ನಿಂತು ಮಾಲೆಮಾಲೆಯಾಗಿ ಕಣ್ಣೀರುಗರೆದನು.

ಉಳಿದವರೆಲ್ಲ ಭ್ರಮೆಯ ಬಳ್ಳಿಯನ್ನು ತುಳಿದುಬಿಟ್ಟವರಂತೆ ದಿಗ್ಭ್ರಮಿಸಿ ಶಿಲಾಮೂರ್ತಿಗಳಂತೆ ಇದ್ದುಬಿಟ್ಟರು.

ಸ್ವಾಮಿಗಳು ಮೆಲ್ಲಮೆಲ್ಲನೆ ಮಾತಾಡತೊಡಗಿದರು. ಆ ನೆಮ್ಮದಿಯಾದ ರಾತ್ರಿಯ ವೇಳೆಯಲ್ಲಿ, ಮರ-ಗಿಡ-ಬಳ್ಳಿಗಳೆಲ್ಲಾ ಅವರ ಮಾತನ್ನು ಕೇಳುವುವುಗಳಂತೆ ಅಚಲವಾಗಿ ನಿಂತಿದ್ದುವು. ಶೆಲ್ಲಮ್ಮ ಇನ್ನೂ ಅವರ ಕಾಲಡಿಯಲ್ಲಿಯೇ ಬಿದ್ದಿದ್ದಳು. ಅವರ ಪಾದಗಳು ಅವಳ ಪುನೀತವಾದ ಕಂಬನಿಗಳಿಂದ ನೆನೆಯುತ್ತಿದ್ದುವು.

"ಏಳು, ಶೆಲ್ಲಂ, ಏಳು. ಈಗ ಏನಾಗಿಹೋಯಿತು? ನೀನು ಇಷ್ಟು ಕಣ್ಣೀರುಬಿಡಲು ನಿನಗೇನು ಕೊರತೆ? ಈ ಪ್ರಪಂಚದಲ್ಲಿ ಸುಖವೂ ದುಃಖವೂ ರಾಶಿರಾಶಿಯಾಗಿ ಬರುವುದು ಸ್ವಾಭಾವಸಿದ್ಧವಲ್ಲವೊ? ಕಳೆದ ಇಪ್ಪತ್ತೆರಡು ವರುಷಗಳಾಗಿ ನಿನ್ನನ್ನು ಕಷ್ಟಕ್ಕೆ ತಳ್ಳಿಹಾಕಿದ ಹಾಳು ಜೀವಾತ್ಮ ಇದೋ ಇಲ್ಲಿದೆ. ಅಂದು ನೀನು ಕಂಡು ಕೆಲೆದು ಕೊಂಡಾಡಿಕೊಂಡಿದ್ದ ಈ ದೇಹ ಬರೀ ಕೊರಡು. ಬಾಳುವೆಯೊಂದು ಮಾಯೆ; ಇದು ಮಣ್ಣಾಗುವುದು ನಿಜ. ಈ ಶರೀರ ಬರಿಯ ಮಣ್ಣು. ನಾಶವಾಗುವ ಈ ಶರೀರದಲ್ಲಿ ಏನಿದೆ? ನಾಶವಿಲ್ಲದ ವಸ್ತುವನ್ನಲ್ಲವೋ ಹುಡುಕಬೇಕು? ಈ ಶರೀರವನ್ನು ಹುಡುಕಲಿಕ್ಕಾಗಿ ವ್ರಯಿಸಿದ ಕಾಲವನ್ನು, ನಾಶವಿಲ್ಲದ ದಿವ್ಯವಸ್ತುವಾದ ಆ ಪರಾಶಕ್ತಿಯನ್ನು ಹುಡುಕುವುದರಲ್ಲಿ ಉಪಯೋಗಿಸಿದ್ದರೆ ಎಂಥ ಲಾಭವಿರುತ್ತಿತ್ತು? ಹೌದು. ಅದು ನಿನಗೆ ತೋರಲಿಕ್ಕೆ ನ್ಯಾಯವಿಲ್ಲ. ನನ್ನನ್ನೇ ದೇವರೆಂದು ನಂಬಿಯೇ ನೀನು ದಾರಿಹಿಡಿದಿದ್ದಿ-

ನಾನು ವ್ಯಾವಹಾರಿಕದಲ್ಲಿ ಸತ್ಯವನ್ನರಸಿ ಕಂಡುಹಿಡಿಯದ ನೀಚನಾಗಿಬಿಟ್ಟೆ. ಏಳೇಳು! ಕಲ್ಪಕಾಂಬೆ ನಿನಗೆ ಒಳ್ಳೆಯ ಪುತ್ರನನ್ನೂ ಅವನಿಗೆ ತಕ್ಕ ಪತ್ನಿಯನ್ನೂ ಕೊಟ್ಟುಬಿಟ್ಟಳು. ಇನ್ನು ನಿನಗೇನು ಚಿಂತೆ? ನನ್ನ ಕಾಲುಗಳನ್ನು ಬಿಡು'' ಎಂದರು.

ಜಗದೀಶನು ಎರಡು ಕೈಗಳಿಂದಲೂ ತನ್ನ ತಾಯಿಯ ತೋಳುಗಳನ್ನು ಹಿಡಿದು. ''ಅಮ್ಮ, ಏಳಮ್ಮ. ದೇವರ ಅನುಗ್ರಹವು ನಮ್ಮನ್ನು ಒಂದುಗೂಡಿಸಿತು. ಎದ್ದುಬಿಡಮ್ಮ'' ಎಂದು ಹೇಳಿದನು.

ಶೆಲ್ಲಮ್ಮ ಮೆಲ್ಲನೆ ಅವರ ಕಾಲುಗಳನ್ನು ಹಿಡಿದಿದ್ದ ಕೈಗಳನ್ನೂ, ಅವರ ಪಾದದೆಡೆಯಲ್ಲಿ ಸಿಕ್ಕಿಕೊಂಡಿದ್ದ ಮುಖವನ್ನೂ ತೆಗೆದುಕೊಂಡು ಕೈ ಜೋಡಿಸಿ,—''ಈ ವೇಷವನ್ನು ತೆಗೆಯಬೇಕು. ಮತ್ತೊಮ್ಮೆ ಈ ವೇಷದಲ್ಲಿ ನಿಮ್ಮನ್ನು ಕಂಡರೆ ನನ್ನ ಎದೆಯೊಡೆದೀತು. ನೀವು ನಮ್ಮೊಂದಿಗಿರುವಂತೆ ವರವನ್ನು ಕೊಡಬೇಕು. ನಿಮ್ಮ ಹೊರತು ನನಗೆ ಬೇರೆ ದೇವರಿಲ್ಲ. ಕಳೆದ ಇಪ್ಪತ್ತೆರಡು ವರುಷಗಳಿಂದಲೂ ನನ್ನ ಹೃದಯದ ಗುಡಿಯೊಳಗೆ ಬೇರೆ ಯಾವ ದೈವವನ್ನೂ ನಾನು ಪೂಜಿಸಲಿಲ್ಲ. ಎದ್ದು ಒಳಗೆ ಬನ್ನಿ. ಕಳೆದುಹೋದುದನ್ನೆಲ್ಲಾ ಮರೆತುಬಿಡೋಣ. ಬಿಸಿಲಲ್ಲಿಯೂ, ಚಳಿಯಲ್ಲಿಯೂ, ಗಾಳಿಯಲ್ಲಿಯೂ ಮರದ ಹಾಗೆ ತಿರುಗಾಡಲಿಕ್ಕೆ ನಿಮಗೆ ಹ್ಯಾಗೆ ಸಾಹಸವುಂಟಾಯಿತೊ? ನೇರಾಗಿ ಬಂದು ನನ್ನನ್ನು ವಿಚಾರಿಸಿ, ನಿಜವನ್ನು ತಿಳಿಯಾಗಿ ಕಂಡುಕೊಳ್ಳದೆ, ನಿಂತ ನೆಲೆಯಲ್ಲಿಯೇ ಓಡಿಬಿಡುವಂತೆ ನಿಮಗೆ ಹ್ಯಾಗೆ ತೋರಿತೊ?'' ಎಂದು ಮತ್ತೆ ಮಾತಾಡಲಾಗದೆ ಬಿಕ್ಕಿ ಬಿಕ್ಕಿ ಅತ್ತಳು ಶೆಲ್ಲಮ್ಮ.

ಸ್ವಾಮಿಗಳಿಗೂ ಕಣ್ಣೀರುಕ್ಕಿತು. ಪರಮ ವೇದಾಂತಿಗಳಾದ ಅವರ ಎದೆಯೂ ದ್ರವಿಸಿತು; ಚಲಿಸಿತು. ನೀರು ತುಂಬಿದ ಕಣ್ಣಿನಿಂದ ಮಗನನ್ನು ನೋಡಿದರು. ಜಗದೀಶ ಮರದಂತೆ ನಿಂತಿದ್ದ. ಅವನ ಕಣ್ಣೂ ನೀರು ನೀರಾಗಿತ್ತು.

''ಅಪ್ಪಾ! ಮಗನೇ! ಅಳಬೇಡ. ನಿನ್ನ ತಾಯಿಯನ್ನೂ ಹೆಂಡತಿಯನ್ನೂ ಏನೂ ಕೊರತೆಯಾಗದಂತೆ ಪೋಷಣೆ ಮಾಡು. ಸರಳವಾದ ದಾರಿಯಲ್ಲಿ ನಡೆ. ಕಲ್ಪಕಾಂಬೆಯನ್ನು ಎಂದೂ ಮರೆಯಬೇಡ. ಇಷ್ಟೇ

ನಾನು ನಿನಗೆ ಹೇಳಬಲ್ಲೆ. ಅತಿ ದೊಡ್ಡದಾದ ಪತ್ರಿಕೆಯ ಕೆಲಸದಲ್ಲಿ ತಲೆಹಾಕಿಕೊಂಡಿರುತ್ತೀ. ಅದರಿಂದ ತಮಿಳ್ ತಾಯಿಗೆ ಮಾತ್ರವಲ್ಲ, ಭಾರತಾಂಬೆಗೇ ಮೇಲಾಗುತ್ತದೆ'' ಎಂದರು.

''ಆದರೆ ನೀವು ಹೇಳುವುದೇನು? ಎದ್ದು ಒಳಗೆ ಬರಲು ಇಚ್ಛೆಯಿಲ್ಲವೊ? ನಾನು ನಿರಪರಾಧಿ, ನನ್ನನ್ನು ಮನ್ನಿಸಿ ಅಂಗೀಕರಿಸಿಕೊಳ್ಳುವುದು ನಿಮ್ಮ ಕರ್ತವ್ಯ, ಏಳಿರಿ'' ಎಂದಳು ಶೆಲ್ಲಮ್ಮ.

ಸ್ವಾಮಿಗಳು ನಗುತ್ತ—''ಶೆಲ್ಲಂ! ಇನ್ನು ಪುನಃ ನನ್ನನ್ನು ಮನೆಯೊಳಗೆ ಎಳೆಯುವುದು ನ್ಯಾಯವೆ? ನೀನೇ ಯೋಚಿಸಿನೋಡು. ಕಳೆದ ಇಪ್ಪತ್ತೆರಡು ವರುಷಗಳಿಂದ ಕಾಡಿನಲ್ಲಿಯೂ ನಾಡಿನಲ್ಲಿಯೂ ತಿರುಗಾಡಿದ ಈ ದೇಹವು ಇನ್ನುಮೇಲೆ ಒಂದು ಕಟ್ಟು ಕಟ್ಟಿಕೊಂಡು ಒಂದೆಡೆಯಲ್ಲಿ ಇದ್ದೀತೆ? ಹಾಗಿದ್ದು ಫಲವೇನು? ಹುರಿದ ಬೇಳೆ ಮೊಳಕೆಯೊಡೆದೀತೆ? ಈ ದೇಹ ಯಾವಾಗ ಒಮ್ಮೆ ನಶ್ವರಸಂಬಂಧವನ್ನು ತೊರೆದುಬಿಟ್ಟಿತೋ ಅಲ್ಲಿಗೇ ಮುಗಿಯಿತು. ಸುಟ್ಟ ಮಣ್ಣೂ ಹಸಿ ಮಣ್ಣೂ ಒಂದಕ್ಕೊಂದು ಅಂಟೀತೆ? ಪುನಃ ಸಂಸಾರಿಯಾಗುವುದು ನ್ಯಾಯವೆ? ಕಲ್ಪಕಾಂಬೆ ಒಪ್ಪುವಳೆ?''

''ಹಾಗಾದರೆ ಇನ್ನೂ ನೀವು ನನ್ನನ್ನು ಅಪರಾಧಿ ಎಂದು ತಿಳಿದೇ ಹೀಗನ್ನುತ್ತೀರಿ?''

''ಶೆಲ್ಲಂ! ಹಾಗನ್ನಬೇಡ. ಎಂದಿಗೂ ಹಾಗಿಲ್ಲ. ನೀನು ನಿನ್ನ ನಿಷ್ಕಳಂಕವಾದ ಶೀಲವನ್ನು ನಿರೂಪಿಸಿಬಿಟ್ಟಿದ್ದಿ. ನಾನೇ ಕರ್ತವ್ಯ ಭ್ರಷ್ಟನು. ನಾನೇ ಅಪರಾಧಿ. ನನ್ನ ಅಪರಾಧಕ್ಕಾಗಿ ನೀನೇ ನನ್ನನ್ನು ಮನ್ನಿಸಿ, ಮೋಕ್ಷದ ದಾರಿಗೊಂದು ದೀಪವಾಗಿ, ನಾನು ಆರಂಭಿಸಿರುವ ಈ ಮಹಾವ್ರತಕ್ಕೆ ಭಂಗವಿಲ್ಲದೆ ನನ್ನನ್ನು ಕಾಪಾಡಬೇಕು. ನಾನು ಬೀಡಿನಲ್ಲಿದ್ದರೇನು? ಕಾಡಿನಲ್ಲಿದ್ದರೇನು? ಹುಚ್ಚನು ಹರಿದ ವಸ್ತ್ರ ಹಂದರಕ್ಕೆ ಒದಗಿತೆಂಬ ಹಾಗೆ, ಪಂಚೂ ಮಾಡಿದ ದ್ರೋಹವು ಮೊದಲು ಕೇಡಾಗಿ ತೋರಿದರೂ ಮೋಕ್ಷವೆಂಬ ಬಿಡುಗಡೆಗೆ ಅದು ದಾರಿತೋರಿಸಿತು. ಆದ್ದರಿಂದ ಆ ಪಂಚೂ ನಮ್ಮಿಂದ ಹೊಗಳಲ್ಪಡತಕ್ಕವನು. ಅವನು ಮಾಡಿದ ಉಪಕಾರವು ಭವಸಾಗರವನ್ನೆ ದಾಟಸಲು ಸಹಾಯಕವಾಯಿತು.

ಅವನನ್ನು ನಿಂದಿಸಬೇಡ. ವಿಧಿ ಮನುಷ್ಯರೂಪದಲ್ಲಿ ಬಂದು, ನಮ್ಮನ್ನು ಅಗಲಿಸಿ ಒಳ್ಳೆಯದನ್ನೇ ಮಾಡಿತು. ಇನ್ನು ಮಿಗಿಲಿರುವ ನಿನ್ನ ಜೀವನ ದಿನಗಳನ್ನು ದೇಶಸೇವೆ–ಈಶಸೇವೆಗಳಿಗೆ ವ್ರಯಮಾಡು. ದೀನರಿಗೆ ಉಪ ಕಾರಮಾಡು. ಸಾಕ್ಷಾತ್ ಜಗದೀಶ್ವರಿಯ ಪ್ರತಿಬಿಂಬವೆಂದೇ ಎಲ್ಲರನ್ನೂ ತಿಳಿದು ವರ್ತಿಸು. ಮತ್ತೇನು ತಾನೇ ಹೇಳಲಿ?" ಎಂದಂದು, "ವಂದೇ ಮಾತರಮಂಬಿಕಾಂ ಭಗವತೀಂ ವಾಣೀರಮಾಸೇವಿತಾಂ" ಎಂದು ಹಾಡುತ್ತಾ ಎದ್ದೇಬಿಟ್ಟರು ಸ್ವಾಮಿಗಳು. ಕೈಜೋಡಿಸಿಕೊಂಡು ಶೆಲ್ಲಮ್ಮನೂ ಅವರನ್ನನುಸರಿಸಿದಳು.

"ಶೆಲ್ಲಂ! ಇನ್ನೂ ನಿನ್ನ ಮನಸ್ಸು ತಿಳಿಯಾಗಲಿಲ್ಲವೆ? ನನ್ನ ಮಾತಿನಂತೆ ನಡೆಯುವುದೇ ನಿನಗೆ ಚೆಂದ. ನನ್ನನ್ನನುಸರಿಸಿ ಬರಬೇಡ!" ಎಂದಂದು ಸ್ವಾಮಿಗಳು ಅತಿವೇಗವಾಗಿ ಹೊರಟುಹೋದರು. ಅವರ ಹಾಡಿನ ಸದ್ದು ಕೊಂಚಕೊಂಚವಾಗಿ ಕರಗುತ್ತ, ಆ ಹಾಡಿನ ಮೂರನೆಯ ಪಾದವು ಮುಗಿಯುವ ಮೊದಲೇ, ಸ್ವಾಮಿಗಳು ಬಹುದೂರ ಹೋಗಿಬಿಟ್ಟರೆಂದು ಶ್ಯಾಮಳೆಯರಿತುಕೊಂಡಳು.

